# ಶೂದ್ರ

ಬೆಲೆ : 1-75 ರೂ

ಈ ಸಂಚಿಕೆಯಲ್ಲಿ

ಕೆ.ವಿ. ತಿರುಮಲೇಶ್—ವೆಂಕಟಲಕ್ಷ್ಮಿ ಬಿ. ಎಸ್.—ಎಚ್. ಎಸ್. ವೆಂಕಟೇಶ್ ಮೂರ್ತಿ—ಬಿ. ಆರ್. ಲಕ್ಷ್ಮಣರಾವ್—ಡಿ.ಎಸ್. ನಾಗಭೂಷಣ—ಹ. ವೆಂ. ವೇಣುಗೋಪಾಲ — ಸುವರ್ಣ ಕಾಡನಕುಪ್ಪೆ — ನಟರಾಜ ಹೊನ್ನವಳ್ಳಿ— ಶಿವರಾಮು ಕಾರಂತ —ಶ್ರೀಶ್ ಚೌಧರಿ—ಕ. ವೆಂ. ರಾಜಗೋಪಾಲ—ಬಿದರಹಳ್ಳಿ ನರಸಿಂಹಮೂರ್ತಿ—ಕನಸಿಗೊಂದು ಕಣ್ಣು



ಹೊಸಚಿಂತನೆಯ ದಿಕ್ಕಿನಲ್ಲಿ ಶೂದ್ರ ತಿಂಗಳ ಪತ್ರಿಕೆ

ಸಂಚಿಕೆ : 9 ಜುಲೈ-1984 ಸಂಪುಟ 6

ಸಹಾಯಕ ಸಂಪಾದಕರು : ನಿರ್ಮಲರೆಡ್ಡಿ–ಆನಂದಮೂರ್ತಿ

ಮುಖಪುಟದ ಕೃಪೆ: ಚಿ.ಸು. ಕೃಷ್ಣಸೆಟ್ಟಿ
(ಮೋನಾಲೀಸಳ ರೂಪಾಂತರ)

ದಯವಿಟ್ಟು ಚಂದಾಕಳಿಸಿ. ಚಂದಾಕಳಿಸುವವರು (21ರೂ) ಡ್ರಾಫ್ಟ್ ಮೂಲಕ (20ರೂ) ಕಳಿಸಿದರೆ ಅನುಕೂಲವಾದೀತು. ಆಜೀವ ಚಂದಾದಾರರಾಗಲು ಪ್ರಯತ್ನಿಸಿ. ಶೂದ್ರ ಬರದಿದ್ದರೆ ಪತ್ರ ಬರೆಯಿರಿ. ಶೂದ್ರ ನವೀಕರಿಸಲು ಮನಸ್ಸಿಲ್ಲದಿದ್ದರೆ ದಯವಿಟ್ಟು ತಿಳಿಸಿ.

ಆಜೀವ ಚಂದಾ : 200ರೂ (ನಾಲ್ಕು ಕಂತುಗಳಲ್ಲಿ)
ವಾರ್ಷಿಕ ಚಂದಾ : 20ರೂ

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜ್ ಅಂಚೆ,
ಬೆಂಗಳೂರು–560 029

# ನಗರ ಪ್ರವೇಶ

—ಫ್ಲೇನರಿ ಓ' ಕೋನರ್

ಮಾರನೆ ದಿನ ಸಾಯಂಕಾಲ ಆರುಗಂಟೆಯ ತನಕ ಹೇಜ್ ಪಟ್ಟಣ ಸೇರಲಿಲ್ಲ. ಬೆಳಿಗ್ಗೆ ತುಸು ಗಾಳಿ ಸೇವಿಸೋಣವೆಂದುಕೊಂಡು ಅವನು ಜಂಕ್ಷನೊಂದರಲ್ಲಿ ಇಳಿದಿದ್ದ. ಆಚೆಕಡೆ ನೋಡುತ್ತಿದ್ದಂತೆ ಟ್ರೇನು ಮುಂದೆ ಸರಿದಿತ್ತು. ಅದರ ಹಿಂದೆ ಧಾವಿಸುತ್ತಿದ್ದಾಗ ಹ್ಯಾಟು ಹಾರಿಹೋದ್ದರಿಂದ ಹ್ಯಾಟನ್ನು ಳಿಸಿಕೊಳ್ಳಲು ವಿರುದ್ಧ ದಿಕ್ಕಿನಲ್ಲಿ ಓಡುವುದು ಅನಿವಾರ್ಯವಾಯಿತು. ಅದೃಷ್ಟವಶಾತ್, ಯಾರೂ ಕದಿಯದಿರಲೆಂದು ಹಸುಬೆ ಚೀಲವನ್ನು ಜತೆಯಲ್ಲೆ ಇರಿಸಿಕೊಂಡಿದ್ದ. ಮುಂದಿನ ಟ್ರೇನು ಹಿಡಿಯಲು ಅಲ್ಲಿ ಆರು ಗಂಟೆ ಹೊತ್ತು ಕಾಯಬೇಕಾಯಿತು.

---

ಅಮೇರಿಕೆಯ ದಕ್ಷಿಣದ ಜಾರ್ಜಿಯಾದಲ್ಲಿ 1925ನೆ ಇಸವಿಯಲ್ಲಿ ಜನಿಸಿದ ಫ್ಲೇನರಿ ಓ' ಕೋನರ್ ತನ್ನ ಮೂವತ್ತೊಂಬತ್ತನೆ ವಯಸ್ಸಿನಲ್ಲಿ ತೀರಿಕೊಂಡಳು. ಕತೆಗಾರ್ತಿಯೆಂದೆ ಪ್ರಸಿದ್ಧಳಾದ ಈಕೆ ಒಂದೆರಡು ಕಾದಂಬರಿಗಳನ್ನೂ ಬರೆದಿದ್ದಾಳೆ. ಇವುಗಳಲ್ಲಿ "ವೈಸ್ ಬ್ಲಡ್" ಜಗತ್ತಿನ ಅತ್ಯುತ್ತಮ ಕಾದಂಬರಿಗಳ ಸಾಲಿನಲ್ಲಿ ನಿಲ್ಲುವಂತ ಕೃತಿ. ಇದರ ಪ್ರಧಾನ ಪಾತ್ರವಾದ ಹೇಜೆಲ್ ಮೋಟ್ಸ್ ಎಂಬ ತರುಣನು ಮಹಾಯುದ್ಧದಿಂದ ಊರಿಗೆ ಮರಳುವ ಯೋಧ, ಯುದ್ಧ ಅವನ ಚಿಕ್ಕಂದಿನ ಧಾರ್ಮಿಕ ನಂಬಿಕೆಗಳನ್ನೆಲ್ಲ ಬುಡ ಮೇಲು ಮಾಡಿರುತ್ತದೆ. ಈ ಸಾಯಿ ಧರ್ಮ ಹಲವು ಹತ್ತು ಪಂಥಗಳ ರೂಪದಲ್ಲಿ ದಟ್ಟವಾಗಿ ಹರಡಿರುವ ದಕ್ಷಿಣದ ಪಟ್ಟಣವೊಂದರಲ್ಲಿ ಈತ ಈ ಸಾಯಿ ಧರ್ಮಕ್ಕೆ ವಿರುದ್ಧವಾಗಿ ಅ-ಧರ್ಮವೊಂದನ್ನು ಪ್ರಚಾರಮಾಡಲು ಶುರುಮಾಡುತ್ತಾನೆ. ಯೇಸುವಿನ ವಿರುದ್ಧ ಬಂಡೇಳುತ್ತಲೆ, ಹೇಜ್ ತನಗರಿವಿಲ್ಲ ದಯೆ ಯೇಸುವಿನ ಅನುಕರಣೆ ಮಾಡುತ್ತ ದುರಂತವನ್ನು ಆಹ್ವಾನಿಸಿಕೊಳ್ಳುವುದರಲ್ಲಿ ಕಾದಂಬರಿ ಮುಗಿಯುತ್ತದೆ. ಇಲ್ಲಿ ಅನುವಾದಿಸಿ ಕೊಟ್ಟ ಎರಡನೆ ಅಧ್ಯಾಯ ಹೇಜೆಲ್ ಮೋಟ್ಸ್‌ನ ಆಗಮನಕ್ಕೆ ಸಂಬಂಧಿಸಿದುದು.

---

ಟಾಕಿನ್‌ಹಾಮ್ ಎಂಬ ನಿಲ್ದಾಣದಲ್ಲಿ ಅವನು ಟ್ರೇನು ಇಳಿದಾಗ ಹಲವು ನಾಮ ಫಲಕಗಳ ಬೆಳಕುಗಳು ಕಣ್ಣಿಗೆ ಬಿದ್ದವು. ಪೀನಟ್ಸ್, ವೆಸ್ಟರ್ನ್‌,ಯೂನಿಯನ್ ಏಜಾಕ್ಸ್, ಟ್ಯಾಕ್ಸಿ, ಹೋಟೆಲ್, ಕ್ಯಾಂಡಿ ವಿದ್ಯುತ್ತಿನಿಂದ ಮೇಲೆ ಕೆಳಗೆ ಚಲಿಸುತ್ತಲೋ ಆಗಾಗ ಜ್ವಲಿಸಿ ಆರಿಹೋಗುತ್ತಲೋ ಇದ್ದುವು. ಚೀಲ ಹಿಡಿದುಕೊಂಡು ಅವಸರವಿಲ್ಲದೆ ಮುನ್ನಡೆದ—ಎಡಕ್ಕೂ ಬಲಕ್ಕೂ ಕತ್ತು ಹೊರಳಿಸಿ ಹೆಸರುಗಳನ್ನೋದುತ್ತ, ನಿಲ್ದಾಣದ ಉದ್ದಕ್ಕೂ ನಡೆದು ನಂತರ ಟ್ರೇನು ಹಿಡಿಯಲು ಹೊರಟವನಂತೆ ಅವಸರವಸರವಾಗಿ ವಾಪಾಸು ನಡೆಯತೊಡಗಿದ. ಭಾರವಾದ ಹ್ಯಾಟಿನ ಕೆಳಗೆ ಮುಖಕ್ಕೊಂದು ಉಗಿ ಬಂದಿತ್ತು. ನೋಡಿವರೆ. ಇವನಿಗೆ ಹೋಗಿ ಸೇರಲು ಸ್ಥಳವಿಲ್ಲವೆಂದು ಹೇಳುವಂತೆಯೇ ಇರಲಿಲ್ಲ. ನಿರೀಕ್ಷಣಾ ಕೊಠಡಿಯಲ್ಲಿ ಎರಡು ಮೂರು ಬಾರಿ ಆಚಿಂದೀಚೆ ಸುತ್ತಿದ ನಾದರೂ ಅಲ್ಲಿನ ಬೆಂಚುಗಳಲ್ಲಿ ಕೂತುಕೊಳ್ಳುವುದಕ್ಕೆ ಮನಸ್ಸಾಗಲಿಲ್ಲ. ಯಾವುದಾ ದರೊಂದು ಖಾಸಗಿ ಸ್ಥಳ ಅವನಿಗೆ ಬೇಕಾಗಿತ್ತು.

ನಿಲ್ದಾಣದ ಒಂದು ಕೊನೆಯಲ್ಲಿ ಶೌಚಗೃಹ. ಅದರ ಮೇಲೆ "ಪುರುಷರು, ಬಿಳಿಯರು" ಎಂದು ಕಪ್ಪು ಬಿಳುಪಿನಲ್ಲಿ ಬರೆದಿತ್ತು. ಬಾಗಿಲು ಸರಿಸಿ ಒಳಹೊಕ್ಕರೆ ಉದ್ದದ ಒಂದು ಕೋಣೆ. ಒಂದು ಬದಿಗೆ ಬೋಗುಣಿಗಳು, ಇನ್ನೊಂದು ಬದಿಗೆ ಮಳದ ಗೂಡುಗಳು. ಕೋಣೆಯ ಗೋಡೆಗಳು ಒಂದು ಕಾಲದಲ್ಲಿ ಶುಭ್ರ ಹಳದಿ ಬಣ್ಣದವಾಗಿದ್ದು ಈಗ ಹಸಿರಿಗೆ ತಿರುಗಿದ್ದವು. ಮೇಲೆಲ್ಲ ಬರಹಗಳು. ಹೆಣ್ಣು ಗಂಡುಗಳ ಅಂಗಾಂಗಗಳ ಸೂಕ್ಷ್ಮ ಚಿತ್ರಗಳು. ಕೆಲವು ಗೂಡುಗಳಿಗೆ ಬಾಗಿಲುಗಳಿದ್ದುವು. ಅಂಥ ಒಂದು ಬಾಗಿಲ ಮೇಲೆ "ಸುಸ್ವಾಗತ" ಎಂದು ಮಸಿಯಿಂದ ದೊಡ್ಡ ಅಕ್ಷರ ಗಳಲ್ಲಿ ಬರೆದಿದ್ದು ಅದಕ್ಕೆ ಮೂರು ಆಶ್ಚರ್ಯ ಚಿಹ್ನೆಗಳನ್ನು ಹಾಕಿ ಹಾವಿನಂಥದೊಂದು ಬರೆ ಎಳೆದಿದ್ದರು. ಹೇಜ್ ಆ ಗೂಡನ್ನು ಹೊಕ್ಕ.

ಆಚೀಚೆಯ ಗೋಡೆಬರಹಗಳನ್ನು ಅಭ್ಯಾಸಮಾಡುತ್ತ ಸಾಕಷ್ಟು ಹೊತ್ತು ಕುಳಿತ ಮೇಲೆಯೆ ಅವನಿಗೆ ಗೋಚರಿಸಿದ್ದು ಟಾಯ್ಲೆಟ್ ಪೇಪರಿಡುವ ಎಡಗಡೆಯಲ್ಲೊಂದು ಬರಹ ಕುಡಿದು ಗೀಚಿದಂತಿದ್ದ ಅದರ ಸಂದೇಶ ಹೀಗಿತ್ತು:

> ಶ್ರೀಮತಿ ಲಿಯೊರಾ ವಾಟ್ಸ್!
> ಅಂಬಕ್ಲಿ ರೋಡು
> ಇಡಿ ಪಟ್ಟಣದಲ್ಲೆ ಅತ್ಯಂತ ಸ್ನೇಹಮಯ ಮಂಚ! ಸೋದರ

ತುಸು ಕಳೆದು ಹೇಜ್ ಜೇಬಿಂದ ಪೆನ್ಸಿಲು ತೆಗೆದು ಒಂದು ಲಕೋಟೆಯ ಬೆನ್ನ ಮೇಲೆ ವಿಳಾಸ ಗುರುತು ಹಾಕಿಕೊಂಡ.

ಹೊರಬಂದಾಗ ಒಂದು ಹಳದಿ ಬಣ್ಣದ ಟ್ಯಾಕ್ಸಿ ಸಿಕ್ಕಿತು, ಡ್ರೈವರನಿಗೆ ಹೋಗಬೇಕಾದ ಜಾಗ ಹೇಳಿದ. ಆತ ಸಣ್ಣ ವ್ಯಕ್ತಿ, ಆದರೆ ದೊಡ್ಡದೊಂದು ಟೊಪ್ಪಿ ಹಾಕಿಕೊಂಡಿದ್ದ. ಬಾಯಿಯ ನಡುವಿನಿಂದ ಚುರೂಟಿನ ತುಂಡೊಂದು ಹೊರಗೆ ಕಾಣಿಸುತ್ತಿತ್ತು. ಕೆಲವು ಕಟ್ಟಡಗಳನ್ನು ಹಾಕಿದ್ದರಷ್ಟೆ. ಅಷ್ಟರಲ್ಲಿ ಡ್ರೈವರ್ ತನ್ನ ಕಡೆ ನೋಡಿ ಕಣ್ಣು ಮಿಟುಕಿಸುತ್ತಿರುವಂತೆ ಹೇಜ್‌ಗೆ ಕನ್ನಡಿಯಲ್ಲಿ ಕಾಣಿಸಿತು. "ಆಕಿ ಗೆಣ್ಯಾ ಅಲ್ವಲ್ಲ ತಾವು?" ಡ್ರೈವರ್ ಕೇಳಿದ.

"ಇದಕ್ಕೆ ಮೊದಲು ಕಂಡೇ ಇಲ್ಲ", ಎಂದ ಹೇಜ್.

"ಹೆಂಗ ತಿಳಿಕೊಂಡ್ರಿ ಮತ್ತ ? ಪಾದ್ರಿಗಳನ್ನೆಲ್ಲ ಹತ್ರ ಸೇರ್ಸೊ ಹೆಂಗ್ಸಲ್ಲ ಅದು." ಮಾತಾಡುವಾಗ ಆತ ಚುರೂಟನ್ನು ಅಲ್ಲಾಡಿಸುತ್ತಿರಲಿಲ್ಲ. ಅದರ ಆಚೀಚೆ ಯಿಂದ ಮಾತಾಡುತ್ತಿದ್ದ.

ಹೇಜ್ ಹುಬ್ಬುಗಂಟಿಕ್ಕಿದ,

"ನಾನೇನೂ ಪಾದ್ರಿ ಅಲ್ಲ. ಆಕೆ ಹೆಸರು ಪಾಯಿಖಾನೇಲಿ ನೋಡ್ದೆ ಅಷ್ಟೆ," ಎಂದ.

"ಪಾದ್ರಿ ಹಂಗ ಕಾಣಿಸ್ತೀರಿ ಮತ್ತ. ಆ ಹ್ಯಾಟಂತೂ ಪಾದ್ರಿ ಹ್ಯಾಟಿನಾಂಗ ಅದ"

"ಇಲ್ಲ, ಅದು ಸಾದಾ ಹ್ಯಾಟು"

ಚಿಕ್ಕ ಮನೆಯೊಂದರ ಮುಂದೆ ಟ್ಯಾಕ್ಸಿ ನಿಂತಿತು. ಒಂದು ಬದಿಯಲ್ಲಿ ಪೆಟ್ರೋಲು ಸ್ಟೇಷನ್ನು. ಇನ್ನೊಂದು ಬದಿಯಲ್ಲಿ ಖಾಲಿ ಸ್ಥಳ ಇದ್ದುವು, ಹೇಜ್ ಇಳಿದು ಕಿಟಕಿ ಮೂಲಕ ಟ್ಯಾಕ್ಸಿ ಬಾಡಿಗೆ ತೆತ್ತ.

"ಬರೀ ಹ್ಯಾಟಿನ ಮಾತಲ್ರಿ. ತಮ್ಮ ಮ್ಯಾರಿ ಮಾಲಿನ ಕಳಿ ಹೇಳ್ತದರಿ"

ಹೇಜ್ ಹ್ಯಾಟನ್ನು ಒಂದು ಕಣ್ಣಿನ ಮೇಲೆ ಜಗ್ಗಿದ.

"ಇಲ್ಲಿ ಕೇಳು, ನಾ ಪಾದ್ರಿ ಗೀದ್ರಿ ಅಲ್ಲ."

"ಅರ್ಥವಾಗತದರಿ. ಈ ಭೂಮಿ ಮ್ಯಾಗ ಪಾದ್ರಿ ಆಗ್ಲಿ ಯಾರೇ ಆಗಿ ಪರಿಪೂರ್ಣ ಅಲ್ರಿ. ಅಲ್ದೆ, ಸ್ವಂತ ತಿಳಕೊಂಡ್ರೇನೆ ಪಾಪ ಎಷ್ಟು ಕೆಟ್ಟದೊಂತ ಜನಕ್ಕೆ ಹೇಳೋದು ಸಾಧ್ಯರಿ"

ಹೇಜ್ ತಲೆಯನ್ನು ಕಿಟಕಿಯೊಳಕ್ಕೆ ಹಾಕಿದ ರಭಸಕ್ಕೆ ಹ್ಯಾಟು ಮತ್ತೆ ಮೇಲಕ್ಕೆ ಹೋಯಿತು. ಏಟು ಬಿದ್ದಂತೆ ಮುಖ ಪೂರ್ತಿ ಭಾವರಹಿತವಾಯಿತು.

"ನನಗೆ ಯಾವುದರಲ್ಲೂ ನಂಬಿಕೆಯಿಲ್ಲ ತಿಳೀತೆ?" ಎಂದ.

ಡ್ರೈವರ್ ಬಾಯಿಯಿಂದ ಚೂರೂಟಿನ ತುಂಡು ಹೊರತೆಗೆದ. "ಯಾವುದ್ರಲ್ಲೂ?" ಎಂದು ಕೇಳಿದ, ಕೇಳಲು ತೆರೆದ ಬಾಯಿಯನ್ನು ಮುಚ್ಚಲಿಲ್ಲ.

"ಒಬ್ಬನಿಗೆ ಒಂದಕ್ಕಿಂತ ಹೆಚ್ಚು ಬಾರಿ ಹೇಳೋ ಅಗತ್ಯಇಲ್ಲ."

ಡ್ರೈವರನ ಬಾಯಿ ಈಗ ಮುಚ್ಚಿತು, ತುಸು ತಡೆದು ಚುರೂಟನ್ನು ಯಥಾಸ್ಥಾನದಲ್ಲಿರಿಸಿ ಅವನೆಂದ: "ಎಲ್ಲಾ ಪಾದ್ರಿಗಳಿಗೂ ಬಂದಿರೋದು ಅದೇ. ನಂಬಿಕೇನೆ: ಇಲ್ಲಧಂಗ ಉತ್ತಮರಾಗಿ ಬಿಟ್ರೆ ಎಲ್ರೂನೂ." ಜಿಗುಪ್ಸೆಯಿಂದಲೂ ಸಿಟ್ಟಿನಿಂದಲೂ ಅವನು ಟ್ಯಾಕ್ಸಿಯನ್ನು ತೆಗೆದುಕೊಂಡು ಹೊರಟು ಹೋದ.

ಹೇಜ್ ತಾನು ಉದ್ದೇಶಿಸಿದ್ದ ಮನೆಕಡೆ ತಿರುಗಿ, ದೃಷ್ಟಿ ಹಾಯಿಸಿದ. ಅದನ್ನೊಂದು ಗುಡಿಸಲೆಂದು ಹೇಳಬಹುದಾಗಿತ್ತು. ಒಂದು ಕಿಟಕಿಯಿಂದ ಮಾತ್ರ ಬೆಚ್ಚನೆ ಬೆಳಕು ಕಾಣಿಸಿತು. ಮೊಗಸಾಲೆಗೆ ಹೋಗಿ ಬಿರುಕಿನ ಮೂಲಕ ಒಳಗೆ ಹಣಿಕಿ ನೋಡಿದರೆ ಕಾಣಿಸಿದ್ದೇ ದೊಡ್ಡದೊಂದು ಬಿಳಿಕಾಲು ತುಸುಹೊತ್ತುತಡೆದು ಬಾಗಿಲು ದೂಡಿದ. ಬೀಗ ಹಾಕಿರಲಿಲ್ಲ. ಒಳಗೆ ಸಣ್ಣದೊಂದು, ಕತ್ತಲಕೋಣೆ. ಅದರ ಎರಡೂ ಬದಿಗೆ ಒಂದೊಂದು ಬಾಗಿಲಿತ್ತು. ಎಡಬದಿಯ ಬಾಗಿಲು ಸರೆಯಿಂದ ಬೆಳಕಿನ ಸಪೂರ ಕೋಲು ಹೊರಬಿದ್ದಿತು. ಬೆಳಕಲ್ಲಿ ನಿಂತು ಒಳಕ್ಕೆ ನೋಡಿದ.

ವಾಟ್ಸಳು ಬಂದು ಬಿಳಿ ಕಬ್ಬಿಣದ ಮಂಚದಲ್ಲಿ ಒಬ್ಬಳೆ ಕುಳಿತು ದೊಡ್ಡದೊಂದು ಕತ್ತರಿಯಿಂದ ಕಾಲಿನ ಉಗುರು ತೆಗೆಯುತ್ತಿದ್ದಳು. ಕಡು ಹಳದಿ ತಲೆಗೂದಲಿನ, ಜಿಡ್ಡು ಪ್ರಸಾದನದಿಂದ ಹೊಳೆಯುತ್ತಿದ್ದ ಬಿಳಿತೊಗಲಿನ ದಪ್ಪ ಹೆಂಗಸು. ಚಿಕ್ಕ ಸೈಜಿನ ಕುಂಕುಮ ಬಣ್ಣದ ನೈಟ್‌ಗೌನು ಆಕೆಯ ಮೈಮೇಲಿತ್ತು.

ಹೇಜ್ ಬಾಗಿಲ ಹಿಡಿಯನ್ನು ಜಗ್ಗಿ ಸದ್ದು ಮಾಡಿದ. ಆಕೆ ತಲೆಯೆತ್ತಿ, ಬಾಗಿಲ ಸೆರೆಯ ಹಿಂದೆ ನಿಂತವನನ್ನು ನೋಡಿದಳು. ನೇರ, ಗಾಢ ದೃಷ್ಟಿ ಅದು. ಕ್ಷಣ ಕಳೆದು ಉಗುರು ಕತ್ತರಿಸುವುದರಲ್ಲಿ ಮತ್ತೆ ನಿರತಳಾದಳು.

ಹೇಜ್ ಒಳಹೊಕ್ಕ, ಸುತ್ತಲೂ ನೋಡಿದ. ಹೇಳುವಂಥದೇನು ಇರಲಿಲ್ಲ. ಮಂಚ, ಕವಾಟು, ಕೊಳೆಬಟ್ಟೆ ಪೇರಿಸಿದ ಒಂದು ಕುರ್ಚಿ ಕವಾಟಿನ ಬಳಿ ಸಾರಿ ಉಗುರಿನ ಅರವನ್ನು ಕೈಯಿಂದ ಮುಟ್ಟಿ ನೋಡಿದ. ಖಾಲಿಯಾದ ಜೆಲ್ಲಿಗ್ಲಾಸನ್ನು ಎತ್ತಿಕೊಂಡ. ಹಳದಿಬಣ್ಣಕ್ಕೆ ತಿರುಗಿದ ನಿಲುಗನ್ನಡಿಯಲ್ಲಿ ವಾಟ್ಸಳ ತುಸು ವಿಕಾರವಾದ ಪ್ರತಿಬಿಂಬ ತನ್ನೆಡೆ ನೋಡಿ ಹಲ್ಲುಕಿರಿಯುವುದು ಕಾಣಿಸುತ್ತಿತ್ತು. ಇನ್ನು

ಸಹಿಸುವುದು ಅವನಿಗಾಗಲಿಲ್ಲ. ಅವಳ ಮಂಚದ ಬಳಿ ಸಾರಿ ಅದರ ಇನ್ನೊಂದು ಕೊನೆಯಲ್ಲಿ ಕುಳಿತುಕೊಂಡ. ಮೂಗಿನ ಒಂದು ಹೊಳ್ಳೆಯ ಮೂಲಕ ದೀರ್ಘವಾಗಿ ಉಸಿರೆಳೆದುಕೊಂಡ. ಅವನ ಕೈ ಹಾಸಿಗೆಯಲ್ಲಿ ಜಾಗ್ರತೆಯಿಂದ ಮುಂದಕ್ಕೆ ಸರಿಯ ತೊಡಗಿತು.

ವಾಟ್ಸಳ ನಾಲಗೆಯ ಕೆಂಪುತುದಿ ಹೊರಬಂದು ಕೆಳತುಟಿಯನ್ನು ಚಪ್ಪರಿಸಿತು, ಬಹುಕಾಲದ ಗೆಳೆಯನನ್ನು ಭೇಟಿಮಾಡಿದಂತಿದ್ದಳು. ಏನೂ ಹೇಳಲಿಲ್ಲ.

ಹೇಜ್ ಅವಳ ಪಾದವನ್ನು ಎತ್ತಿಕೊಂಡ. ಭಾರವಾಗಿತ್ತು. ಆದರೆ ತಣ್ಣಗಿರಲಿಲ್ಲ. ಒಂದು ಬದಿಗೆ ಸರಿಸಿಕೊಂಡು ಕೈಯನ್ನು ಅದರ ಮೇಲೆ ಇರಿಸಿದ.

ವಾಟ್ಸಳ ಬಾಯಿ ಉಠಿದು ದಂತ ಪಂಕ್ತಿ ಹೊರ ಕಾಣಿಸಿತು. ಎಡೆಬಿಟ್ಟ ಚೂಪು ಚೂಪಾದ ಚಿಕ್ಕ ಹಲ್ಲುಗಳ ಮೇಲೆ ಹಸಿರು ಕಲೆಗಳಿದ್ದವು. ಚಾಚಿ ಅವನ ತೋಳನ್ನು ಹಿಡಿದು ಕೊಂಡಳು. "ಏನೋ ಹುಡುಕುವ ಹಾಗಿದೆ?" ಎಂದಳು.

ಆಕೆ ಅಷ್ಟು ಬಿಗಿಯಾಗಿ ಹಿಡಿದಿರುತ್ತಿದ್ದರೆ ಅವನು ಕಿಟಕಿಯ ಮೂಲಕ ಹೊರಕ್ಕೆ ಹಾರಿಬಿಡುತ್ತಿದ್ದ. "ಹೂಂ, ಹೌದು" ಎನ್ನಲು ತುಟಿಗಳು ತಯಾರಾದರೂ ಸದ್ದು ಹೊರಬರಲಿಲ್ಲ.

"ಏನೋ ಮನಸ್ಸಿನಲ್ಲಿದೆ?" ವಾಟ್ಸಳು ಅವನ ಸೆಟೆದ ದೇಹವನ್ನು ಹತ್ತಿರಕ್ಕೆ ಎಳೆದು ಕೊಂಡು ಕೇಳಿದಳು.

"ನೋಡು ನಾ ಬಂದಿರೋದು ಮಾಮೂಲಿ ಕಸುಬಿಗೆ" ಆತ ಸ್ವರವನ್ನು ನಿಯಂತ್ರಿಸಿಕೊಳ್ಳುತ್ತ ನುಡಿದ.

ವಾಟ್ಸಳ ಬಾಯಿ ಇನ್ನಷ್ಟು ಚೂಪಾಯಿತು. ಮಾತು ಹಾಳು ಮಾಡುತ್ತಿರವನಲ್ಲ ಎಂದು ಚಕಿತಳಾದವಳಂತೆ ಕಾಣಿಸಿದಳು. "ಆರಾಮ ಮಾಡಿಕೊಳ್ಳಬಹುದು", ಎಂದಳು ಸುಮ್ಮನೆ.

ಒಂದು ಕ್ಷಣ ಅವರು ಪರಸ್ಪರ ದಿಟ್ಟಿಸಿ ನೋಡಿದರು. ಇಬ್ಬರೂ ಅಲುಗಾಡ ಲಿಲ್ಲ. ಹೇಜ್ ಸಾಧಾರಣಕ್ಕಿಂತ ಉತ್ತರದ ದನಿಯಲ್ಲಿ ಹೇಳಿದ: "ನಾ ಪಾದ್ರಿ ಗೀದ್ರಿ ಅಲ್ಲ ಗೊತ್ತಾಯಿತೆ? ಇದನ್ನ ನೀನು ಅರಿತುಕೋಬೇಕು".

ವಾಟ್ಸಳು ಅವನನ್ನು ಸಣ್ಣ ದೇಶಾವರಿ ನಗೆಯೊಂದಿಗೆ ದಿಟ್ಟಿಸಿದಳು. ಆಮೇಲೆ ತನ್ನ ಇನ್ನೊಂದು ಹಸ್ತದಿಂದ ಆತನ ಮುಖದ ಕೆಳಗೆ ಕಚಗುಳಿಯಿಡುತ್ತ ಅಂದಳು: "ಆಯ್ತು ಮಗಾ ನೀ ಪಾದ್ರಿ ಅಲ್ಲಾಂತ ಮಮ್ಮಿಗೆ ಬೇಸರ ಏನಿಲ್ಲ." ●

ಅನುವಾದ: ಡಾ|| ಕೆ.ವಿ. ತಿರುಮಲೇಶ್

# ಒಂದು ಪರಿಚಯ

—ವೆಂಕಟಲಕ್ಷ್ಮಿ ಬಿ.ಎಸ್.

ರಾಜಲಕ್ಷ್ಮಿ ಪ್ರಶ್ನೆಗಳಿದ್ದ ಕಾಗದಾನ ಮಡಚಿಟ್ಟು ಮಾತಾಡ ತೊಡಗಿದರು— ಅವಸರ, ಅವಸರವಾಗಿ. ತಮ್ಮ ಮನಸ್ಸಿನಲ್ಲಿರೋದನ್ನೆಲ್ಲ ಬೇಗ ಬೇಗ ಹೇಳಿ ಮುಗಿಸಿ, ಹೇಳಿದ್ದನ್ನೇ ಮರೆತು ಬಿಡಬೇಕು ಅನ್ನುವಂತೆ ; ಅವರ ಸಿಟ್ಟು, ಜಿಗುಪ್ಸೆ, ನಿರಾಸೆ ಎಲ್ಲವನ್ನೂ ಹೊರ ಹಾಕುವಂತೆ.

"ನಾನು ಬಿ. ಎಂ. ಶ್ರೀಕಂಠಯ್ಯನವರ ಎರಡನೆ ಮಗಳ ಮೊದಲನೆ ಮಗಳು" —ಇವೆಲ್ಲ ರಾಜಲಕ್ಷ್ಮಿಯವರ ಮಾತುಗಳು. "ನಾನು ಮೊದಲು ತಾತನ ಮನೆಯಲ್ಲಿದ್ದೆ. ಅದು ಮನೇನೇ ... ... , ಆಗ ಯಾರ್‍ಯಾರು ಬರೀತಿದ್ರೋ ಅವರೆಲ್ಲ ಅಲ್ಲಿ ಸೇರ್ತಿದ್ರು. ನಾನು ಮನೇಲಿ ಚಿಕ್ಕವಳು. ತುಂಬಾ ಮುದ್ದುಮಾಡ್ತಿದ್ರು. ಅವರ ಜತೆ ಬೆಂಗಳೂರು, ಧಾರವಾಡ, ಮೈಸೂರಲ್ಲಿ ಇದ್ದೆ.

"ಇದ್ದಕ್ಕಿದ್ದ ಹಾಗೆ ಒಂದು ಸರ್ತಿ ರಜೆಗೆ ಬಾ ಅಂತ ಅಪ್ಪ ನನ್ನನ್ನು ಮನೆಗೆ ಕರಿಸಿದ್ರು, ಅದೂ ಸುಳ್ಳು ಹೇಳಿ, ಅಮ್ಮಂಗೆ ಮೈ ಚೆನ್ನಾಗಿಲ್ಲ ಅಂತ ಹೇಳಿ. ವಾಪಸ್ಸು ತಾತನ ಮನೆಗೆ ಕಳಿಸಲೇ ಇಲ್ಲ. ಅದೇ ನೋಡಿ, ನನ್ನ ಜೀವನದಲ್ಲಿ a great shock. It was a traumatic experience. The atmosphere in both the houses was poles apart. ಅಜ್ಜ, ಅಜ್ಜಿ ಬ್ರಹ್ಮಚರ್ಯದ ಹಂತ ತಲಪಿದ್ದೋರು. ನಾನು ಗಮನಿಸಿದ್ದೀನಿ — The difference between a house where there is no sex, and a house where there is sex. ಬ್ರಹ್ಮಚರ್ಯ ಇರೋ ಮನೇಲಿ peace, calmness. ಆದರೆ sex ಇರೋ ಕಡೆ, a sort of strangeness in the house ... ... ruffles. ನನಗೆ ಅದ್ಯಾಕೋ double cot ಕಂಡರೇ ಮುಜುಗರ. ತಾಯಿ, a saintly lady. ತಾತನ ಮನೇಲಿ ಚಿಕ್ಕವಳಾಗಿದ್ದೆ. ಇಲ್ಲಿ ನಾನೇ ದೊಡ್ಡೋಳು.

"ಆಗಲೇ ನೋಡಿ, ನನ್ನ ಮನಸ್ಸು ಅಂತರ್ಮುಖವಾಗ ತೊಡಗಿದ್ದು. ಅಲ್ಲಿಂದ ಸಿಕಂದ್ರಾಬಾದ್‌ಗೆ ಹೋದ್ವಿ, ಆಮೇಲೆ ಪೂನ, ಕಲ್ಯಾಣ್. ಪುಸ್ತಕಗಳೇ ನನ್ನ

ಸ್ನೇಹಿತರು. ಆಗ ಜಾನ್ ಗಾಲ್ಸ್‌ವರ್ತೀನ "ಆಪಲ್ ಟ್ರೀ" ಸಿಕ್ಕಿತು. "ಸೇಬಿನಗಿಡ" ಅಂತ ಭಾಷಾಂತರ ಮಾಡಿದೆ. ಹುಬ್ಬಳ್ಳಿಯ ಸಂಜೀವಿನಿ ಗ್ರಂಥಮಾಲೆ ಅಂತ ಕಾಣುತ್ತೆ, ಅದಕ್ಕೆ 25 ರೂಪಾಯಿ ಬಹುಮಾನ ಕೊಟ್ರು. ಕಲ್ಯಾಣ್‌ದಿಂದ ಮೈಸೂರಿಗೆ ಬಂದೆ, ಎಂ. ಎ. ಓದೋದಕ್ಕೆ.

"ಆಗ ಯಾರ್‍ಯಾರು ಇದ್ರು ?" ತಮಗೆ ತಾವೇ ಪ್ರಶ್ನೆ ಹಾಕಿಕೊಂಡು ರಾಜಲಕ್ಷ್ಮಿ ಮತ್ತೆ ಮಾತನಾಡಿದರು. "ಅನಂತಮೂರ್ತಿ, ರಾಮಚಂದ್ರ ಶರ್ಮ, ಸದಾಶಿವ, ನಿರಂಜನ, ರಾಘವ ... ... ಅಡಿಗರು ನಮಗೆಲ್ಲ ಪೆಟರ್ನಲ್ ಫಿಗರ್ ಇದ್ದ ಹಾಗೆ. ಎಲ್ಲ ಹುಡುಗರು. ಸುಮಾರು 18-19 ವಯಸ್ಸು. ನಾವೇನಾದ್ರೂ ಮಾಡಬೇಕು ಅನ್ನೋದು. ಆಗ ತ್ರಿವೇಣಿ ಬರೆಯೋದಕ್ಕೆ ಶುರು ಮಾಡಿದ್ಲು. ಅನುಪಮಾ ಬರೀತಿದ್ಲು. ಇವರೆಲ್ಲರಿಗಿಂತಲೂ ಬೇರೆಯಾದ್ದನ್ನ ಬರೀಬೇಕು ಅಂತ ಅದೇನೋ ಹುಮ್ಮಸ್ಸು. "ಬೇಡಾಂದ್ರೆ ಅಂತ ಅವಳು ಕೊರಳು ಕೊಂಕಿಸಿದಳು" ಅಂತ ಯಾರಾದ್ರೂ ಬರೆದರೆ ಆಡಿಕೋತಿದ್ವಿ.

"ಅಷ್ಟು ಹೊತ್ತಿಗೆ ನಾನು ಆಗಿನ ಕಾಲಕ್ಕೆ ಬಂದ ಕನ್ನಡ, ಇಂಗ್ಲಿಷ್ ಪುಸ್ತಕಗಳನ್ನು ಓದಿಕೊಂಡಿದ್ದೆ. ವರ್ಜೀನಿಯಾ ವುಲ್ಫ್, ರೋಸಲಿನ್, ಮುಂತಾದವರು. ಆದರೆ ನನ್ನ ಮೇಲೆ ತುಂಬಾ ಪ್ರಭಾವ ಬೀರಿದ್ದು english poetry.

"ಆಗಲೇ ಶರ್ಮ ಪದ್ಯ ಬರೆಯೋದಕ್ಕೆ ಶುರು ಮಾಡಿದ್ದ, ನೀನು 'he' 'she' ಅಂತ ಬರಿ. ನಾನು 'it' ಅಂತ ಬರೀತೀನಿ ಅಂತ ಶರ್ಮ ಹೇಳಿದ್ದ. 'It' ಅಂದ್ರೆ 'sex', ಆಗ ಅವನು ತುಂಬಾ ಸೆಕ್ಸಿ ಅಂತ ಅನ್ನಿಸಿಕೊಂಡಿದ್ದ ಅಲ್ವಾ ಒಂದು ಸಲಿಯಂತೂ ನೀನು ರೊಮ್ಯಾಂಟಿಕ್ ಆಗಿ ಬರೀತೀ ಅಂತ ರೇಗಿಸಿದ್ದಾಗ ನಾನು ಅತ್ಕೊಂಡು ಅಡಿಗರ ಹತ್ರ ಓಡಿ ಹೋಗಿದ್ದೆ. ಆ ಹುಡುಗರ ಗುಂಪಿನಲ್ಲಿ ಇದ್ದದ್ದು ನಾನೊಬ್ಬಳೇ ಹುಡುಗಿ, ಅವರ ಮಧ್ಯೆ ಇರೋದು ಒಂದು ಮಜಾ ಅನ್ನಿಸ್ತಿತ್ತು.

"ನನ್ನ ಕಸಿನ್‌ನ ಕಸಿನ್ ಒಬ್ಬ ಇದ್ದ, ನ್ಯೂಕ್ಲಿಯರ್ ಫಿಸಿಸಿಸ್ಟ್, ನನಗೆ ಇವತ್ತಿಗೂ ಅರ್ಥ ಆಗೋದಿಲ್ಲ ; Of all persons, he wished to marry me. ಅವನ ತಂದೆ ಲಕ್ಷಾಧೀಶ್ವರರು.

"ನನ್ನಪ್ಪ ಕಾಂಟ್ರಾಕ್ಟ್ ಮಾಡ್ತಾ ಇದ್ರು. ಕೈ ಸುಟ್ಟುಕೊಂಡಿದ್ರು. ಪ್ರಾಮಾಣಿಕ ಮನುಷ್ಯ. ಅವರ ಪ್ರಾಮಾಣಿಕತೆ ಯಾವ ಋಜುತ್ವದಿಂದಲೂ ಬಂದದ್ದಲ್ಲ. It was more out of fright. ಅವರಿಗೆ ಥಟ್ಟನೆ ಒಂದು ಆಸೆ ಬಂತು. ತಾವು ಇಂಥ ಬೀಗರ ಸಂಬಂಧ ಬೆಳೆಸಿದರೆ ತಾವೂ ಶ್ರೀಮಂತರಾಗಬಹುದು ಅನ್ನೋ

ದುರಾಲೋಚನೆ. ಅವರ ಮಗನ್ನ ಮದುವೆಯಾಗು ಅಂತ ಬಲವಂತ ಮಾಡೋದಕ್ಕೆ ಶುರು ಮಾಡಿದ್ರು. ಅಷ್ಟು ಹೊತ್ತಿಗೆ ಆಸ್ಟ್ರೇಲಿಯಾಗೆ ಹೋಗಿದ್ದ ಅವನು ವಾಪಸ್ಸು ಬಂದ.

"ನನ್ನಪ್ಪನ್ನ ಕಾಡಿದೆ, ಬೇಡಿದೆ. ಅವನ ಅಭಿರುಚಿ, ನನ್ನದು ಬೇರೆ ಬೇರೆ ಅಂತ ಹೇಳಿದೆ. ಅವನದು scientific mind—persuit of knowledge was his aim. ಇದ್ದಕ್ಕಿದ್ದ ಹಾಗೆ one fine morning, the Deccan Herald flashed a headline that he was going to be conferred with F.R.C.S. ಇಂಥಾ ಬುದ್ಧಿವಂತ.

"ನಮ್ಮಪ್ಪ ಕೊನೇಗೆ ಅಂದ್ರು, ಈಗ ಮಾಡ್ಕೋ ನೋಡೋಣ. ಅಷ್ಟೂ ನಿಂಗೆ ಅವನ ಜತೆ ಇರೋದಕ್ಕೆ ಸಾಧ್ಯಾನೇ ಇಲ್ಲ ಅಂದ್ರೆ ಡೈವೋರ್ಸ್ ಮಾಡೋವಂತೆ. ಈ ಒಂದು ವಾಕ್ಯ ನನ್ನ ತಲೇಲಿ ಭದ್ರವಾಗಿ ಕೂತುಬಿಡ್ತು. ಅವನ ಜತೆ ಒಂದು ಮೂರ್ನಾಲ್ಕು ದಿನ ಮಾತ್ರ ಮಲಗಿರಬಹುದು ಅಷ್ಟೆ. ನಾನಾಗ ಇಂಡಿಯನ್ ಹಿಸ್ಟರಿ ಓದ್ಕೋತಾ ಇದ್ದೆ, ಅದರಲ್ಲೂ ಮುಗಲ್ ಪಿರಿಯಡ್, Delienation of a man's mind, deteriorating to the level of madness, ಇದು ನನ್ನ ಕಾಡ್ತು, Then I started experiencing nightmares-night mare of being persued, tortured, raped. ನಾನು ನಿದ್ದೆ ಮಾಡ್ತಿದ್ದಾಗ ಎಷ್ಟೋಸಲಿ ಒಂದು ದೊಡ್ಡ ಕೈ ನನ್ನ ಹಿಡ್ಕೋಳೋಕ್ಕೆ ಬರ್ತಿದ್ದ ಹಾಗಾಗ್ತಿತ್ತು. This was a state when the mind could not come to grips.

"ಅಷ್ಟು ಹೊತ್ತಿಗೆ ಸರಿಯಾಗಿ ನೋಡಿ, ನನ್ನ ಸ್ನೇಹಿತೆ ಆತ್ಮಹತ್ಯೆ ಮಾಡಿಕೊಂಡು ಸತ್ತಳು. ತುಂಬಾ ನಿಕಟ ಸ್ನೇಹಿತೆ ಬೆಂಗಳೂರು ಆಕಾಶವಾಣೀಲಿ ಮೊದಲ ನ್ಯೂಸ್ ರೀಡರ್. ನೋಡೋದಕ್ಕೆ ಚೆನ್ನಾಗಿದ್ಲು. ಸಂಗೀತ ತುಂಬಾ ಚೆನ್ನಾಗಿ ಬರ್ತಿತ್ತು. ಆದರೂ ಅವಳದ್ದು ಎಂಥ ಟ್ರಾಜಿಡಿ. ನಂಗೆ ಆ ಘಟನೇನ ಮರೆಯೋದಕ್ಕೆ ಆಗ್ಲಿಲ್ಲ. ಹಗಲು ರಾತ್ರಿ ಆ ಪ್ರಸಂಗ ಕಾಡ್ತಿತ್ತು. ನಾನು ಇಲ್ಲೇ ಇದ್ರೆ ಅವಳ ಹಾಗೇ ಸಾಯಬಹುದು ಅನ್ನೋ ಭಯಂ ನನ್ನ ಆವರಿಸಿಕೊಂಡ್ತು.

"ನಾನು ಗಂಡನ ಜತೆ ಮೂರ್ನಾಲ್ಕು ದಿವಸ ಮಾತ್ರ ಮಲಗಿರಬಹುದು ಅಂದ್ನಲ್ಲ, ಎಷ್ಟು ಆಶ್ಚರ್ಯಾಂದ್ರೆ ಅಷ್ಟರಲ್ಲೇ ಗರ್ಭಿಣಿಯಾಗಿದ್ದೆ. ತಾಯಿ ಮನೆಗೆ ಬಂದೆ, ಹೆಣ್ಣು ಮಗು ಆಯ್ತು. ವಾಪಸ್ಸು ಗಂಡನ ಹತ್ರಕ್ಕೆ ಹೋಗಲಿಲ್ಲ.

"ಗೆಳತಿಯ ಸಾವು ಕಾಡ್ತಾ ಇತ್ತು. ಗಂಡನ್ನ ಬಿಟ್ಟು ಸಮಾಜಾನ ಎದುರಿಸೋದು ಕಷ್ಟ ಅನ್ನಿಸತೊಡಗಿತು. ಮನೆಗೆ ಬಂದವರು ಯಾರೂ ನನ್ನ ಏನೂ ಕೇಳ್ತಾ ಇರಲಿಲ್ಲ. ತಾಯೀನ, ದೊಡ್ಡಮ್ಮನ್ನ ದಬಾಯಿಸ್ತಿದ್ರು, ಆಡ್ಕೋತಿದ್ರು ನಾನು ಅಷ್ಟು ಹೊತ್ತಿಗಾಗಲೇ ಫಿಲಾಸಫಿ ಚೆನ್ನಾಗಿ ಓದಿಕೊಂಡಿದ್ದೆ. ಹರಿದ್ವಾರ. ಪುಷ್ಕರ್. ಆಂಧ್ರದಲ್ಲಿರೋ ಮಚಲಿಪಟ್ಟಣ ಎಲ್ಲಾ ಕಡೆ ಸುತ್ತಾಡಿದೆ. ಮಚಲಿಪಟ್ಟಣದಲ್ಲಿ ಶಂಕರ ಮಠ ಇದೆ. ಅಲ್ಲೊಂದು ಗಾಯತ್ರಿ ಪೀಠ. ಅಲ್ಲಿ ವಿದ್ಯಾಶಂಕರ ಭಾರತಿ ಅಂತ ಒಬ್ಬರು ಇದ್ರು. ಅವರು ನನ್ನ ನೋಡಿದ ಕೂಡಲೆ, "ಹೋದ ಜನ್ಮದಲ್ಲಿ ನೀನು ನನ್ನ ಮಗಳಾಗಿದ್ದೆ, ನಿಂಗೋಸ್ಕರ ಕಾಯ್ತಾ ಇದೀನಿ ಬಾ" ಅಂದ್ರು, ನಾನು ಹೇಳಿದೆ, ಮನೇಲಿ ನಂಗೆ ಜವಾಬ್ದಾರಿ ಇದೆ ಅಂತ. ಮನೇಲಿ ಮೂರು ಜನ ಬೆಳೆದ ತಂಗೀರು, ಪುಟ್ಟ ತಂಗಿ ಇದ್ರು. ತಮ್ಮ ಇದ್ದ. ನನ್ನ ಚಿಕ್ಕಮಗು ಇತ್ತು. ಅವರು ನಿನಗೆ ಸಾಧ್ಯವಾದಾಗ ಇಲ್ಲಿಗೆ ಬಾ ಅಂದ್ರು. ಇನ್‌ಫಾರ್ಮಲ್ ಸನ್ಯಾಸ ಕೊಟ್ಟು ನಂಗೆ "ಮೈತ್ರೇಯಿ" ಅಂತ ಹೆಸರು ಕೊಟ್ರು. ನಾನು ಆಗ್ಲಿಂದ ಬಿಳಿ ಸೀರೆ ಉಡೋದಕ್ಕೆ ಶುರು ಮಾಡ್ದೆ. ಇದಕ್ಕೆ "ನಿರ್ಗುಣ ಉಪಾಸನೆ" ಅಂತ ಹೆಸರು.

"ನನ್ನ ತಂಗೀಗೆ ಮದುವೆಯಾಯ್ತು. ಪುಟ್ಟ ತಂಗಿ ಅವಳ ಜತೇಲೇ ಹೋಯ್ತು. ನನ್ನ ಪುಟ್ಟ ಮಗಳಿಗೆ ಒಂದಿನ ಅವಳ ತಂದೆಯಿಂದ ಕಾಗದ ಬಂತು– ಒಂದೇ ವಾಕ್ಯ– "ನೀನು ನನ್ನ ಹತ್ರ ಬರ್ತೀಯಾ ?" ಅಂತ. ಆ ಮಗೂಗೆ ಅದೇನು ಅರ್ಥವಾಯ್ತೋ ನೋಡಿ, ಅದಕ್ಕಾಗ ಸುಮಾರು ಏಳು ವರ್ಷ. ಕಾಗದದ ಮೇಲೆ ಬರ್ತೀನಿ ಅಂತ ಬರೀತು. ನಾನು ಅದನ್ನ ಅವನ ಹತ್ರಕ್ಕೆ ಕಳಿಸಿಬಿಟ್ಟೆ.

"ನನ್ನಮ್ಮ ಸತ್ತರು. ಅವರು ಸತ್ತಾಗ ನನಗೆ ನನ್ನ ಧ್ಯಾನಕ್ಕೆ ಇದ್ದ ಒಂದು ದೊಡ್ಡ ತೊಂದರೆ ನಿವಾರಣೆ ಆದ ಹಾಗಾಯ್ತು. ಯಾರ ಮಾತನ್ನಾದ್ರೂ ತೆಗೆದು ಹಾಕಬಹುದು. ಆದ್ರೆ ತಾಯಿ ಮನಸ್ಸನ್ನ ನೋಯಿಸೋಕಾಗೋದಿಲ್ಲ ನೋಡಿ.

"ಈಗ ನನ್ನ ಮೇಲೆ ಮತ್ತಷ್ಟು ಜವಾಬ್ದಾರಿ. ಅಷ್ಟು ಹೊತ್ತಿಗೆ ನಾನು, ನನ್ನ ತಂಗೀರು ಆಧ್ಯಾತ್ಮದ ಎಲ್ಲ ಪುಸ್ತಕಗಳನ್ನೂ ಓದ್ಕೊಂಡಿದ್ವಿ; ಮನೇಲಿ ಭಜನೆ ಮಾಡ್ತಿದ್ವಿ. ಒಬ್ಬ ತಂಗಿ ಸಿವಿಲ್ ಎಂಜಿನಿಯರ್. ಸ್ವಲ್ಪ ಅಂತರ್ಮುಖಿ. ಆನಂದಾಶ್ರಮದ ಜತೆ ಸಂಪರ್ಕ ಬೆಳೆಸಿಕೊಂಡಿದ್ದಳು. ಅವಳು ಜೆ. ಕೃಷ್ಣಮೂರ್ತಿ ಶಿಷ್ಯೆ. ಇನ್ನೊಬ್ಬಳು ಸೋಷಿಯಾಲಜಿ ಎಂ. ಎ. ಸೇಂಟ್‌ಮೀರಾ ಕಾಲೇಜಿನಲ್ಲಿ ಲೆಕ್ಚರರ್. ಅವಳು ವಾಸ್ವಾನಿ ಅವರ ಶಿಷ್ಯಳಾದಳು. ನಾನು ಪೂನಾದಲ್ಲಿ ಸುಮಾರು ಹತ್ತು. ವರ್ಷ ಇದ್ದೆ. ಅದೊಂದು ನಿಷ್ಕಾಮ ಕರ್ಮ ಅಂತ ಭಾವಿಸಿಕೊಳ್ಳುತ್ತ, using it as Sadhana.

ತಮ್ಮ ಮದುವೆ ಆದಾಗ ನಂಗೆ ಬಿಡುಗಡೆ. ಮನೆಗೆ ಸೊಸೆ ಬಂದಳು. ಉತ್ತರ ಕಾಶಿಗೆ ಹೊರಟು ಬಿಟ್ಟೆ. ಅಲ್ಲಿ ಮುಕುಂದಲಾಲ್ ಪಾಠಕ್ ಇದ್ರು. ಅವರು ಸ್ಟ್ರಕ್ಚರಲ್ ಎಂಜಿನಿಯರ್, ಆಮೇಲೆ ಅಮೇರಿಕಾಗೆ ಹೋದರು. ಪಂಜಾಬಿಗೆ ಹೋಗಿದ್ದಾಗ ಅಲ್ಲಿ ನಂಗೆ "ಗಾಯತ್ರಿ"ಯ ಇನ್‌ಫ್ಲ್ಯೂಯೆನ್ಸ್ ಆಯ್ತು. ಇದು ಆರ್ಯ ಸಮಾಜದ ಡಾಕ್ಟರಿನ್. ಗಾಯತ್ರಿ ಅಪರೂಪದ ದೇವರು. ನಾನು ಗಾಯತ್ರಿ ಉಪಾಸನೆಯಲ್ಲಿ ತೊಡಗಿದೆ. I had a Vision of Gayatridevi, ಮುಕುಂದಲಾಲ್ ಪಾಠಕ್ "ದರ್ಶನ" ವನ್ನು ಸಾಧಿಸಿಕೊಂಡಿದ್ರು. ಗಾಯತ್ರಿ ದೇವಿಯ ಜತೆ "ವಾರ್ತಾಲಾಪ" ಮಾಡ್ತಿದ್ರು. He could predict future. He could read past and the present. He could bless or curse.

"1957 ರಲ್ಲಿ ನಾನು ಸಂಪೂರ್ಣವಾಗಿ austere life ನಡೆಸೋದಕ್ಕೆ ಶುರು ಮಾಡಿದೆ. ಅದೇ ವರ್ಷ ಚಕ್ರಾಟಕ್ಕೆ ಹೋದೆ. ಅನೇಕ ಸಿದ್ಧಿಗಳನ್ನ ಪಡೆದುಕೊಂಡೆ. ಅದು ಕರ್ಮಯೋಗ. I tried to possess the mental make-up of a sadhaka – ಗಾಯತ್ರಿಯನ್ನು "ಸಾಕಾರ ಸುಗುಣ" ಆಕಾರದಲ್ಲಿ ಕಂಡುಕೊಳ್ಳೋ ಪ್ರಯತ್ನ, Secluded life ನಡೆಸೋದು, ಎಲ್ಲದರ ಬಗ್ಗೆ–human concepts ಬಗ್ಗೆ inference ಗಳನ್ನು draw ಮಾಡೋದು. ಇದು ಒಂದು ರೀತಿ concretisation of an abstract form... ..."

ರಾಜಲಕ್ಷ್ಮಿ ಈಗ ಪತ್ರಿಕೆಗಳನ್ನೂ ಓದುವುದಿಲ್ಲ, ಪುಸ್ತಕಗಳನ್ನಂತೂ ಮುಟ್ಟೋದೇ ಇಲ್ಲ. ಬೆಳಗಿನ ಜಾವ ಮೂರರಿಂದ ನಾಲ್ಕು ಗಂಟೆಯೊಳಗಾಗಿ ಎದ್ದು meditation ಮಾಡೋದು, ಬದುಕುವುದಕ್ಕೋಸ್ಕರ ಒಂದಿಷ್ಟು 'ಕಿಚಡಿ' ಮಾಡ್ಕೊಂಡು ತಿನ್ನೋದು, ಇಷ್ಟೇ ಅವರ ಚಟುವಟಿಕೆ. ಹೆಂಗಸರನ್ನೇ ಸೇರಿಸದಿರುವ ಮುಚಲಿಪಟ್ಟಣದ ಆಶ್ರಮದಲ್ಲಿ ಇವರಿಗೆ ಮಾತ್ರ ವಿಶೇಷ ಪ್ರವೇಶ. ತಮ್ಮ ವಯಸ್ಸು ಚಳಿಯನ್ನು ತಡೆಯಲಾರದು ಅನ್ನೋ ಕಾರಣಕ್ಕಾಗಿ ಅವರು ಬೇಸಿಗೆಯಲ್ಲಿ ಉತ್ತರಕಾಶಿಯಲ್ಲಿ ಉಳಿದು, ಚಳಿಗಾಲವನ್ನು ಮುಚಲಿಪಟ್ಟಣದಲ್ಲಿ ಕಳೆಯುತ್ತಾರೆ.

ಬಿ. ಎಂ. ಶ್ರೀ ಶತಾಬ್ದಿ ನಡೆಯದಿದ್ದರೆ ರಾಜಲಕ್ಷ್ಮಿ ಇಲ್ಲಿಗೆ ಬರುತ್ತಲೇ ಇರಲಿಲ್ಲ. ಅವರೇ ಹೇಳಿದ ಹಾಗೆ. "ಮುಚಲಿಪಟ್ಟಣದ ಶಂಕರಮಠದವರು ವಿಶಾಲಾಕ್ಷಿ ಕಳಿಸಿದ್ದ ಟೆಲಿಗ್ರಾಂ ಓದಿ ನನ್ನನ್ನು ದಬ್ಬಿ, ನನಗೆ ತುಂಬಾ ಇಷ್ಟರಾಗಿದ್ದ ತಾತನ ಶತಾಬ್ಧಿಯಲ್ಲಿ ಭಾಗವಹಿಸಬೇಕೆಂದು ಬಲವಂತ ಮಾಡದೇ ಇದ್ದಿದ್ದರೆ" ಈ ಭೇಟಿ ಸಾಧ್ಯವಾಗುತ್ತಲೇ ಇರಲಿಲ್ಲ.

# ಕಾವ್ಯಾರ್ಥಚಿಂತನ

ಎಚ್. ಎಸ್. ವೆಂಕಟೇಶಮೂರ್ತಿ

ಕಾವ್ಯಾರ್ಥಚಿಂತನದ ಮುನ್ನುಡಿಯಲ್ಲಿ ಡಾ॥ ಜಿ. ಎಸ್. ಶಿವರುದ್ರಪ್ಪನವರು ಈ ಕೃತಿ ರಚನೆಯ ಹಿಂದಿನ ಉದ್ದೇಶ ಮತ್ತು ದೃಷ್ಟಿಕೋನವನ್ನು ಹೀಗೆ ವಿವರಿಸುತ್ತಾರೆ: ಈ ಕೃತಿಯಲ್ಲಿ ನನ್ನ ಗಮನ ಮುಖ್ಯವಾಗಿ ಕೆಲವು ಕಾವ್ಯತತ್ವ ಹಾಗೂ ಪರಿಕಲ್ಪನೆ ಮತ್ತಿತರ ಸಂಗತಿಗಳನ್ನು ತೌಲನಿಕವಾಗಿ ವಿವೇಚಿಸುವ ಕಡೆಗೆ, ಇದುವರೆಗೆ ಸುಸಮರ್ಥವಾಗಿ ನಿರೂಪಿತವಾಗಿರುವ ಸಂಗತಿಗಳನ್ನು ಸಾಧ್ಯವಾದ ಮಟ್ಟಿಗೆ ಪುನರಾವರ್ತಿಸದೆ, ಆದರೆ ಅವುಗಳನ್ನು ಇಲ್ಲಿನ ವಿಷಯ ಪ್ರತಿಪಾದನೆಗೆ ಅಗತ್ಯವಾದೆಡೆ ಬಳಸಿಕೊಳ್ಳುತ್ತ, ಪೂರ್ವ ಹಾಗೂ ಪಶ್ಚಿಮದ ಚಿಂತನೆಗಳಲ್ಲಿರುವ ಸಾಮ್ಯ ಹಾಗೂ ವೈಶಿಷ್ಟ್ಯಗಳನ್ನು ಗುರುತಿಸುತ್ತ, ಈ ತೌಲನಿಕ ವಿಧಾನದಿಂದ ಹೊರಡುವ ಕೆಲವು ಹೊಸ ಅಥವಾ ಬೇರೆಯೆ ಆದ ವಿಚಾರಗಳನ್ನು ಪ್ರಸ್ತಾಪಿಸುವ ಕಡೆಗೆ ನನ್ನ ಗಮನವನ್ನು ಕೇಂದ್ರೀಕರಿಸಿದ್ದೇನೆ. ಮುಖ್ಯವಾಗಿ ಈ ಕೃತಿ ಇದುವರೆಗು ಈ ಕ್ಷೇತ್ರದಲ್ಲಿ ನಡೆದಿರುವ ಅಧ್ಯಯನಕ್ಕೆ ಪೂರಕವೂ, ಅಧ್ಯಯನದ ಮುಂದುವರಿಕೆಯೂ ಆಗುವುದರ ಜೊತೆಗೆ ಸ್ವರೂಪ ಹಾಗೂ ವೈಶಿಷ್ಟ್ಯಗಳಲ್ಲಿ ಬೇರೆಯದೇ ಆಗಬೇಕೆಂದು ನನ್ನ ಉದ್ದೇಶ.

ಜಿ. ಎಸ್. ಎಸ್. ಅವರೇ ಪ್ರಸ್ತಾಪಿಸಿರುವಂತೆ ಕನ್ನಡದಲ್ಲಿ ಈಗಾಗಲೇ ಈ ಕ್ಷೇತ್ರದಲ್ಲಿ ಬಂದಿರುವ ಮುಖ್ಯ ಕೃತಿಗಳು ಕುವೆಂಪು ಅವರ ರಸೋವೈಸ:, ತೀನಂಶ್ರೀ ಅವರ ಭಾರತೀಯ ಕಾವ್ಯಮೀಮಾಂಸೆ, ಡಾ. ಕೆ. ಕೃಷ್ಣಮೂರ್ತಿ ಅವರ ಸಂಸ್ಕೃತ ಲಾಕ್ಷಣಿಕರ ಕೃತಿಗಳ ಅನುವಾದಗಳು, ಮತ್ತು ವಿ.ಎಂ. ಇನಾಂದಾರ್ ಅವರ ಪಾಶ್ಚಾತ್ಯಕಾವ್ಯ ಮೀಮಾಂಸೆಯ ಇತಿಹಾಸವನ್ನು ಕುರಿತ ಕೃತಿ.

ಈ ಹಿನ್ನೆಲೆಯಲ್ಲಿ, ಕಾವ್ಯಾರ್ಥಚಿಂತನ, ಭಾರತೀಯ ಮತ್ತು ಪಾಶ್ಚಾತ್ಯದ ಕೆಲವು ಕಾವ್ಯತತ್ವ ಹಾಗೂ ಪರಿಕಲ್ಪನೆಗಳ ತೌಲನಿಕ ಅಧ್ಯಯನಕ್ಕೇ ಮಹತ್ವ ಕೊಟ್ಟ ಬೃಹತ್‌ಗ್ರಂಥ ಆಗಿರುವುದರಿಂದ ತನ್ನದೇ ವಿಶಿಷ್ಟ ಸ್ವರೂಪ ಪಡೆದಿರುವುದು ನಿಜ. ಜೊತೆಗೆ ಜಿ. ಎಸ್. ಎಸ್. ಅವರು ಈ ಹಿಂದೆ ರಚಿಸಿದ

ವಿಮರ್ಶೆಯು ಪೂರ್ವ ಪಶ್ಚಿಮಕ್ಕೆ ಇದು. ಪೂರಕ ಮತ್ತು ಮುನ್ನಡೆಯ ಕೃತಿಯೂ ಆಗುತ್ತದೆ. ಕಾವ್ಯಾಧ್ಯಯನ ಎರಡು ಮುಖ್ಯ ಘಟ್ಟಗಳನ್ನು ಮೀಮಾಂಸೆ ಮತ್ತು ವಿಮರ್ಶೆಗಳು ಆಕ್ರಮಿಸುತ್ತವೆ ಎಂಬುದೇ ಅದಕ್ಕೆ ಕಾರಣ.

ಭಾರತೀಯ ಮತ್ತು ಪಾಶ್ಚಾತ್ಯ ಚಿಂತನೆಯ ಎಲ್ಲ ವಿವರಗಳನ್ನೂ ಕಣ್ಣ ಮುಂದೆ ಇರಿಸಿಕೊಂಡು, ಅವುಗಳ ಸಾಮಿತಿಯನ್ನು ಸೂಕ್ಷ್ಮಭೇದಗಳನ್ನೂ ಕೂಡ, ಆಶ್ಚರ್ಯ ಕರವಾಗಿ ಕಾಣಿಸುತ್ತಾ ಹೋಗುವುದು ಜಿ. ಎಸ್. ಎಸ್. ಅವರ ಬರವಣಿಗೆಯ ಕ್ರಮ. ಇದರಿಂದ ಒಂದು 'ಚಿಂತನೆ'ಯನ್ನು ಸಮಗ್ರವಾಗಿ ಪಡೆದುಕೊಳ್ಳುವ ಬಗೆಯನ್ನು ಗ್ರಂಥದುದ್ದಕ್ಕೂ ಕಾಣಬಹುದು. ಪ್ರತಿಭೆ ಅನ್ನುವ ಕಾವ್ಯತತ್ವದ ಬಗ್ಗೆ ಭಾರತೀಯ ಚಿಂತನೆ, ಪಾಶ್ಚಾತ್ಯ ಚಿಂತನೆಗಳು ಪರಸ್ಪರ ಪೂರಕವಾಗುವುದನ್ನು, ಒಂದರ ಅಂಕೆ ಯನ್ನು ಇನ್ನೊಂದು ತುಂಬಿಕೊಡುವುದರಿಂದ, ಒಟ್ಟಾರೆ ಆ ಕಾವ್ಯತತ್ವದ ಬಗ್ಗೆ ಸಮಗ್ರ ಕಲ್ಪನೆ ಮೂಡುವುದನ್ನು ಉದಾಹರಣೆಗೆ ನೋಡಬಹುದು. ಈ ರೀತಿಯ ಬರವಣಿಗೆಯ, ಆನುಷಂಗಿಕವಾದ ಇನ್ನೊಂದು ಉಪಯೋಗವೆಂದರೆ ಪಾರಿಭಾಷಕ ಪದಗಳ ಖಚಿತ ಮತ್ತು ನಿರ್ದುಷ್ಟ ಬಳಕೆಗೆ ಒದಗುವ ಚಿಂತನೆಗಳು ಶಕ್ತಿ, ಪ್ರತಿಭೆ ಪ್ರತಿಭಾನ ಮೊದಲಾದ ಪದಗಳನ್ನು ಪಾಶ್ಚಾತ್ಯ 'ಚಿಂತನೆ'ಗಳೊಂದಿಗೆ ಸಮೀಕರಿಸಿ ನಡೆಸುವ ಚರ್ಚೆ ಇದಕ್ಕೆ ಉದಾಹರಣೆ.

Inspiration ಎಂಬುದಕ್ಕೆ ನಮ್ಮ 'ರಸಾವೇಶ' ಎಂಬುದನ್ನು ಸಂವಾದಿಯಾಗಿ, ಗುರುತಿಸಿ ಸ್ಫೂರ್ತಿ ಹೇಗೆ ಪ್ರತಿಭೆಗಿಂತ ಭಿನ್ನ ಮತ್ತು ಪ್ರತಿಭೆಗೆ ಪೂರಕ ಎಂಬು ದನ್ನು ಸ್ಫೂರ್ತಿ ಎಂಬ ಪ್ರಕರಣದಲ್ಲಿ ವಿವೇಚಿಸಲಾಗಿದೆ (ಸ್ಫೂರ್ತಿ ನೋಟಕ್ಕಲ್ಲ ಮಾಟಕ್ಕೆ ಸಂಬಂಧಿಸಿದ್ದು.) ಲೇಖಕರ ಅಧ್ಯಯನ ಕ್ರಮ ತಲಸ್ಪರ್ಶಿಯಾದುದರಿಂದ ಸ್ಫೂರ್ತಿ ಚಿಂತನೆ ಭಾವಗೀತೆಯೊಂದಿಗೆ ಸಂಬಂಧ ಸ್ಥಾಪಿಸಿಕೊಂಡು, ಮಹಾಕಾವ್ಯ ಮತ್ತು ಸ್ಫೂರ್ತಿತತ್ವದ ಜಿಜ್ಞಾಸೆಯವರೆಗೆ ತೆಗೆದುಕೊಂಡು ಹೋಗುತ್ತದೆ.

ಪ್ರತಿಭೆಗೆ ಪೂರಕವಾದ ವ್ಯುತ್ಪತ್ತಿ ಎಂಬ ಪರಿಕಲ್ಪನೆ, ಪಾಶ್ಚಾತ್ಯರ ಪರಂಪರೆಯ ಪ್ರಜ್ಞೆ (ಚಾರಿತ್ರಿಕ ಪ್ರಜ್ಞೆ)ಯೊಂದಿಗೆ ಸಂವಾದಿಯಾಗಿ ಚರ್ಚಿತವಾಗುತ್ತದೆ. ನಮ್ಮ ಬಹುಜ್ಞತೆಯ ಪಟ್ಟಿಗೆ (ಲೋಕ, ಕಾವ್ಯ, ಶಾಸ್ತ್ರ) ಬೆನ್‌ಜಾನ್ಸನ್ ಹೇಳುವ 'ಅಗತ್ಯ'ಗಳು ಹೊಂದುವ ಬಗೆಯನ್ನು ದಾಖಲಿಸಲಾಗಿದೆ. ವ್ಯುತ್ಪತ್ತಿ ಬಹುಜ್ಞತೆ ಮಾತ್ರವಲ್ಲ. ಅದು ಉಚಿತಾನುಚಿತ ಪ್ರಜ್ಞೆಯೂ ಹೌದು, ಕಾವ್ಯದಿಂದ ಓದುಗ ಪಡೆಯುವ ತಿಳಿವಳಿಕೆಯೂ ಹೌದು, ಎಂಬ ಚಿಂತನೆಗಳು ಕೂಡಿಕೊಳ್ಳುತ್ತವೆ.

ಉಪಮೆ—ರೂಪಕ—ಪ್ರತಿಮೆ ಎಂಬ ಪ್ರಕರಣದಲ್ಲಿ ಸಂಕೇತ (Sign) ವೆನ್ನುವ ಅಭಿದಾಕ್ಕೂ ಪ್ರತೀಕ (Symbol)ವನ್ನು ಲಕ್ಷಣಕ್ಕೂ, ಪ್ರತಿಮೆ (image)

ಯನ್ನು ವ್ಯಂಜನಕ್ಕೂ ಹೊಂದಿಸಿ ನಡೆಸಿರುವ ಚಿಂತನೆ ಕುತೂಹಲಕಾರಿ. ಉಪಮೆ ರೂಪಕವಾಗುವ ಪರಿಯನ್ನು ಉದಾಹರಣೆಯೊಂದಿಗೆ ವಿವರಿಸಿರುವ ಕ್ರಮ ಸೊಗಸಾಗಿದೆ. ಹಾಗೇ ಪ್ರತಿಮಾತತ್ವವನ್ನು (image) ಧ್ವನಿ ತತ್ವದೊಂದಿಗೆ ಹೋಲಿಸಿ ಚಿಂತಿಸುವ ರೀತಿ ಆಸಕ್ತಿ ಕೆರಳಿಸುತ್ತದೆ. ಆದರೆ ಧ್ವನಿತತ್ವಕ್ಕೆ ನಮ್ಮ ಮೀಮಾಂಸಕರು ಕೊಡುವ ಉದಾಹರಣೆಗಳು ಘನವಾದುವಲ್ಲವಾದುದರಿಂದ, ಅವರ ಚಿಂತನೆಯನ್ನು ಪ್ರತಿಮಾ ತತ್ವದೊಂದಿಗೆ ಹೋಲಿಸುವಾಗ ಕೆಲವು ತೊಡಕುಗಳು ಬರಬಹುದು. ಯಾಕೆಂದರೆ ಅವರ ಗ್ರಹಿಕೆ, ಪ್ರತಿಮೆಯ ಅರ್ಥಕ್ಕೆ ಸಂವಾದಿಯೇ ಎಂದು ನೋಡಲು, ಅವರು ಕೊಡುವ ಸ್ವರಚಿತ ಲಘು ಉದಾಹರಣೆಗಳು ಉಪಯೋಗಕ್ಕೆ ಬರುವಂತಿಲ್ಲ.

'ರೀತಿಯ ಸ್ವರೂಪ ಶೈಲಿಯ ಸಮಸ್ಯೆ ಎಂಬ ಪ್ರಕರಣ 'ರೀತಿ' ಮತ್ತು (Style)ತತ್ವಗಳನ್ನು ಆಮೂಲಾಗ್ರವಾಗಿ ಚರ್ಚಿಸುತ್ತದೆ. Style ಮತ್ತು ರೀತಿಯ ಸಮೀಕರಣ ಸೊಗಸಾಗಿ ಬಂದಿದೆ. ದೇಸಿ ಮತ್ತು ಮಾರ್ಗ (ಕನ್ನಡದ) ಗಳ ಚರ್ಚೆ ಇಲ್ಲೇ ನಡೆಸಬಹುದಾಗಿತ್ತೇನೋ? ಆಧುನಿಕ ಶೈಲಿ ಶಾಸ್ತ್ರ ಈ ಚಿಂತನೆಯನ್ನು ಹೇಗೆ ಬೆಳೆಸೀತು ಎಂಬುದು ಶೈಲಿಶಾಸ್ತ್ರಜ್ಞರು ನಡೆಸಬೇಕಾಗಿರುವ ಚರ್ಚೆ.

ಪಾಶ್ಚಾತ್ಯರಲ್ಲಿ ಕವಿಸಮಯ ಇದೆಯೇ ಎಂಬುದು ಚರ್ಚಿಸಬೇಕಾದ ವಿಷಯ. ಜಿ. ಎಸ್. ಎಸ್. ಅವರೊಂದಿಗೆ ಒಮ್ಮೆ ಚರ್ಚಿಸುವಾಗ ನಾನು ಈ ಪ್ರಶ್ನೆ ಎತ್ತಿದೆ. Swan Songನ್ನು ಅವರು ಉದಾಹರಿಸಿ ಅಲ್ಲಿ ಕವಿಸಮಯ ಇದೆ, ಆದರೆ ಆ ಬಗ್ಗೆ ಸಾಕಷ್ಟು ಚರ್ಚೆ (ನಮ್ಮಲ್ಲಿ ನಡೆದಷ್ಟು?) ಅಲ್ಲಿ ನಡೆದಂತಿಲ್ಲ ಎಂದರು. ಪ್ರಸ್ತುತ ಗ್ರಂಥದ ಕವಿಸಮಯ ಪ್ರಕರಣದಲ್ಲಿ ಹಳೆಯ ಚಿಂತನೆಗಳ ಸವಿವರ ಪರಿಶೀಲನೆಯೊಂದಿಗೆ, ಕವಿಸಮಯವನ್ನು ಪ್ರತಿಮೆಯಾಗಿ ಸ್ವೀಕರಿಸಬಹುದೆಂಬ ಸೂಚನೆಯೂ ಇದೆ.

ಕವಿ ಸಮಯದಲ್ಲಿ ಬರುವ ಜಾತಕ, ಚಕ್ರವಾಕ, ಚಕೋರ ಇವುಗಳು ಕೇವಲ ಕವಿಕಲ್ಪಿತವಾದ ಪಕ್ಷಿಗಳಲ್ಲ—ಲೋಕದಲ್ಲಿ ವಾಸ್ತವವಾಗಿ ಇರತಕ್ಕವು ಎಂಬುದನ್ನು ಹೇಳುವ ಟಿಪ್ಪಣಿ ಆಶ್ಚರ್ಯ ಹುಟ್ಟಿಸುತ್ತದೆ.

ವಾಸ್ತವವಾದ ಮತ್ತು ಸ್ವಭಾವೋಕ್ತಿಗಳನ್ನು ಸಂವಾದಿಗಳಾಗಿ ಚರ್ಚಿಸುತ್ತಾ, ವಾಸ್ತವವಾದದ ಬಗ್ಗೆ ಲೇಖಕರು ತೆಗೆದುಕೊಳ್ಳುವ ನಿಲುವು ಉಚಿತವಾದುದಾಗಿದೆ. 'ವಾಸ್ತವವಾದವೆಂದರೆ ಇದ್ದುದನ್ನು ಇದ್ದಹಾಗೆ ಯಥಾವತ್ತಾದ ಭಾಷೆಯಲ್ಲಿ ಹೇಳುವುದು—ಎಂಬ ಅಭಿಪ್ರಾಯವನ್ನು ಕೈಬಿಡಬೇಕು. ಇದು ವಾಸ್ತವವಾದ ಹೌದೆ ಅಲ್ಲವೆ ಎಂಬುದನ್ನು ನಿರ್ಣಯಿಸುವ ಮೊದಲ ಸಾಧನ ಕೇವಲ ಅಭಿವ್ಯಕ್ತಿ ಅಲ್ಲ; ಅದರ ಹಿಂದಿರುವ ಧೋರಣೆ ಹಾಗೂ ಅನುಭವ' ಈ ನಿಲುವಿನಿಂದಾಗಿ ವಾಸ್ತವವಾದ

ಪ್ರತೀಕ ಮತ್ತು ಪ್ರತಿಮಾಮಾರ್ಗವನ್ನು ಒಳಗೊಂಡಂತಾಗುತ್ತದೆ.

ನಾಟಕ ಪ್ರಯೋಗದಲ್ಲಿ ಪ್ರಸ್ತಾಪಿತವಾಗುವ ದೂರಭಂಗ ಮತ್ತು ಎಡ್ವರ್ಡ್ ಬುಲ್ಲೋನ ಮಾನಸಿಕ ದೂರದ ಕಲ್ಪನೆಗಳನ್ನು ಒಟ್ಟಿಗೇ ಇಟ್ಟು ಚರ್ಚಿಸಲಾಗಿದೆ. ದೂರ ಭಂಗ ನಾಟಕಕ್ಕೆ ಸಂಬಂಧಿಸಿದ್ದಾದರೆ, ಮಾನಸಿಕ ದೂರ ಕವಿ—ಓದುಗರಿಗೆ ಸಂಬಂಧಿಸಿ ಪ್ರಸ್ತಾಪಿತವಾದದ್ದು ಎಂಬುದನ್ನು ಗುರ್ತಿಸಲಾಗಿದೆ.

ನಿಯತಿ ಕೃತಿ ನಿಯಮ ಸಾಹಿತ್ಯದ ಬಗ್ಗೆ ಬರೆಯುವಾಗ—'ಲೋಕದ ಯಥಾವತ್ತಾದ ನಿರೂಪಣೆಯನ್ನು ಮಾಡಲು ಬದ್ಧವಾದ ವಾಸ್ತವವಾದೀ ಪ್ರತಿಕೃತಿ ಸಾಹಿತ್ಯದಲ್ಲಿ ನಿಯತಿಕೃತ ನಿಯಮ ಸಾಹಿತ್ಯವಿರಬೇಕಾಗಿಲ್ಲ' ಎಂಬ ಲೇಖಕರ ನಿಲುವನ್ನು ಒಪ್ಪಬಹುದಾದರೂ ಇರುವುದು ಅಪೇಕ್ಷಣೀಯವೂ ಅಲ್ಲ' ಎಂಬ ನಿಲುವನ್ನು ಒಪ್ಪುವುದು ಕಷ್ಟ. ವಾಸ್ತವವಾದವು ಪ್ರತಿಮಾರ್ಗವನ್ನು ಒಳಗೊಳ್ಳಬಹುದೆಂಬುದನ್ನು ಹಿಂದೆಯೇ ಒಪ್ಪಲಾಗಿದೆ-ಜೊತೆಗೆ ಮಾರ್ಕ್ವೆಜ್, ಕಾಫ್ಕಾ ಮೊದಲಾದವರ ಕೃತಿಗಳು ನಿಯತಿಕೃತಿ ನಿಯಮಸಾಹಿತ್ಯಕ್ಕೆ ಉದಾಹರಣೆಗಳಾಗಿ ದೊರಕುತ್ತವೆ. ವಿಚಾರದ ಈ ಎಳೆಯ ಮುಂದುವರಿಕೆಯಾಗಿ (Fantacy)ಯ ಕಲ್ಪನೆಯೂ ಚರ್ಚಿತವಾಗಬಹುದಿತ್ತೇನೋ....

ಕಾವ್ಯಸ್ವರೂಪವನ್ನು ಕುರಿತ ಪ್ರಕರಣದಲ್ಲಿ ಲೇಖಕರು ಒಂದು ಹೊಸ ನೋಟದತ್ತ ಓದುಗರ ಗಮನ ಸೆಳೆಯುತ್ತಾರೆ. 'ಕೇವಲ ಅಭಿನಯಿತವಾಗುತ್ತಿರುವ ನಾಟಕ ಹಾಗೂ ಪ್ರೇಕ್ಷಕನ ಸಂದರ್ಭವನ್ನು ವಿವರಿಸುವಲ್ಲಿ ಹೆಚ್ಚು ಸಾರ್ಥಕವಾಗುವ 'ರಸತತ್ವ', ಓದುಗ ಹಾಗೂ ಸಾಹಿತ್ಯಕೃತಿಯ ಸಂಬಂಧದ ಅನುಭವವನ್ನು ವಿವರಿಸುವಲ್ಲಿ ಸಮಗ್ರವಾಗಿ ಅನ್ವಯಿಸಲು ಬಾರದಂತೆ ಎಲ್ಲೋ ನಿಂತು ಬಿಡುವಂತೆ ತೋರುತ್ತದೆ. ಅದರ ಬದಲು ಕಾವ್ಯದ ಶಾಬ್ದಿಕ ಅನುಭವವನ್ನು ಕುರಿತು ಚರ್ಚಿಸುವ ಧ್ವನಿತತ್ವ ಸಾಹಿತ್ಯ ಕೃತಿಗಳಿಗೆ ಹೆಚ್ಚು ಅನ್ವಯವಾಗುವ ಒಂದು ಕಾವ್ಯ ತತ್ವವಾಗಿದೆ'.

ಕೊನೆಯ ಪ್ರಕರಣದಲ್ಲಿ, ಕಳೆದ ಶತಮಾನದವರೆಗೂ ನಮ್ಮಲ್ಲಿ ಕಾವ್ಯ ಚರ್ಚೆ, ಅಲಂಕಾರಶಾಸ್ತ್ರ ಮತ್ತು ಕಾವ್ಯ ಮೀಮಾಂಸೆಯ ಹಂತದಲ್ಲೇ ನಿಂತು ಬಿಟ್ಟಿರುವುದನ್ನು ಸೂಚಿಸಿ, ಅದಕ್ಕೆ ಕಾರಣಗಳನ್ನೂ ಚರ್ಚಿಸಲಾಗಿದೆ. ಭಾರತೀಯ ಕಾವ್ಯ ಮೀಮಾಂಸೆಯ ಬಹುಮಟ್ಟಿನ ತತ್ವಗಳು ವಿಮರ್ಶೆಯ ಕ್ರಿಯೆಗೆ ಅಷ್ಟೇನೂ ಸಹಾಯಕವಾಗುವಂತೆ ತೋರುವುದಿಲ್ಲ ಎಂಬುದು ಜಿ. ಎಸ್. ಎಸ್. ಅವರ ಒಟ್ಟಾರೆ ನಿಲುವು. ಕವಿ ಶಿಕ್ಷೆಯೇ ಭಾರತೀಯ ಕಾವ್ಯಮೀಮಾಂಸೆಯ ಮುಖ್ಯ ಉದ್ದೇಶವಾಯಿತೆಂಬುದನ್ನು ಲೇಖಕರು ಗುರ್ತಿಸಿದ್ದಾರೆ. ಸಹೃದಯನಿಗೆ ಅತ್ಯಂತ ಮುಖ್ಯವಾದ ಸ್ಥಾನವನ್ನು ಕೊಟ್ಟು, ಮತ್ತು ಕಾವ್ಯದ ಸಾರವಾದ ರಸದ ಚರ್ಚೆಯನ್ನು

ಸಹೃದಯಾನುಭವವನ್ನೇ ಕೇಂದ್ರವಾಗಿರಿಸಿಕೊಂಡು ನಡೆಯಿಸಿದ ಭಾರತೀಯ ಕಾವ್ಯ ಮೀಮಾಂಸೆ. ತನ್ನ ಕಾವ್ಯ ಚರ್ಚೆಯನ್ನು ಕವಿಗಳಿಗಾಗಿ ಉದ್ದೇಶಿಸಿತೆ ಹೊರತು ಸಹೃದಯರಿಗಲ್ಲ. ಒಂದು ವೇಳೆ ಕಾವ್ಯಮೀಮಾಂಸೆ ಸಹೃದಯರಿಗಾಗಿಯೂ ಉದ್ದೇಶಿತ ವಾದ ಸಾಹಿತ್ಯ ವಿಮರ್ಶೆಯ ಅಂಶಗಳನ್ನು ಒಳಗೊಂಡಿದ್ದರೆ, ಅದು ಬಹುಶಃ ಸಾಹಿತ್ಯದ ಸ್ವರೂಪವನ್ನೇ ಬದಲಾಯಿಸಬಹುದಾಗಿತ್ತು. ಎಂದು ಊಹಿಸುವುದು ತಪ್ಪಲ್ಲ' ಜಿ. ಎಸ್. ಎಸ್. ಅವರ ಈ ವಿಚಾರ ನಮ್ಮ ಕಾವ್ಯಮೀಮಾಂಸೆಯ ಕೊರತೆಯನ್ನು ಸರಿಯಾಗಿ ಗ್ರಹಿಸಿದೆ.

ಕಾವ್ಯ ವಿಮರ್ಶೆ, ಕಾವ್ಯದ ಅರ್ಥೈಕೆ ಮತ್ತು ಮೌಲ್ಯಮಾಪನ ಈ ಎರಡು ಹಂತಗಲ್ಲಿ ನಡೆಯುವುದಾದ್ದರಿಂದ, ಭಾರತೀಯ ಕಾವ್ಯಮೀಮಾಂಸೆಯ ತತ್ವಗಳನ್ನು ಕಾವ್ಯದ ಅರ್ಥೈಕೆಗೆ ಎಷ್ಟು ಮಟ್ಟಿಗೆ ಬಳಸಬಹುದು, ಭಾರತೀಯ ಕಾವ್ಯಮೀಮಾಂಸೆ ಒದಗಿಸುವ ಪಾರಿಬಾಷಿಕ ಪದಗಳನ್ನು ಇಂದಿನ ವಿಮರ್ಶೆಯಲ್ಲಿ ಎಷ್ಟು ಯುಕ್ತವಾಗಿ ಬಳಸಬಹುದು ಎಂಬುದನ್ನು 'ಪ್ರಯೋಗಗಳು' ಮಾತ್ರ ಸಾಬೀತುಗೊಳಿಸಬಲ್ಲವು. ಕಾವ್ಯಾರ್ಥಚಿಂತನ ಓದುವಾಗ ಅಂಥ ಸಾಧ್ಯತೆಗಳು ಅನೇಕ ಇವೆ ಎಂಬುದು ಮಾತ್ರ ಓದುಗನ ಗಮನಕ್ಕೆ ಬರುವ ಸಂಗತಿ ಪಾಶ್ಚಾತ್ಯ ಚಿಂತನೆಗಳೇ ಇರಲಿ—ಅವನ್ನು ನಮ್ಮ ಭಾಷೆಯಲ್ಲಿ ಬೆಳೆದುಕೊಳ್ಳುವುದೂ ಅತ್ಯಗತ್ಯವಷ್ಟೆ? ಮತ್ತು ಸಾಮಾನಂತರ ಚಿಂತನೆಗಳಿದ್ದಲ್ಲಿ ನಮ್ಮವನ್ನೇ ನಾವು ಉಳಿಸಿ ಬೆಳೆಸಿಕೊಳ್ಳಬಹುದಲ್ಲ? ಈ ಎರಡೂ ದೃಷ್ಟಿಯಿಂದಲೂ ಕಾವ್ಯಾರ್ಥಚಿಂತನ ಒಂದು ಮಹತ್ವದ ಆಕರಗ್ರಂಥ. ನಾವು ಎಲ್ಲಿ ನಿಂತಿದ್ದೇವಿ ಎಂಬುದನ್ನು ಅದು ನಮಗೆ ತೋರಿಸಿಕೊಡುತ್ತಿದೆ.

ಓದಿ:

ರುಜುವಾತು

ಅಂಕಣ

ಪಂಚಮ

# ತಿಂಗಳ ಕಾವ್ಯ

## ಪ್ರೀತಿ

ಹೀಗೆ ನೋಡಿದ, ಅವನು ಹೀಗೆ ನೋಡಿದ,
ಒಣ ಬೇರಿಗೆ ನೀರೂಡುವ ಹಾಗೆ ನೋಡಿದ.
ಏನು ಮಾಡಿದ? ನನಗೇನು ಮಾಡಿದ?
ಹೊಸ ಚೇತನ ನನ್ನಲಿ ಹರಿವಂತೆ ಮಾಡಿದ.

ಹೇಗೆ ನರಳಿದೆ ! ಅಹಾ, ಹೇಗೆ ನರಳಿದೆ!
ಮೈಯು ತುಂಬ ಚಿಗುರು ನಿಮಿರಿದಂತೆ ನರಳಿದೆ.
ಹೇಗೆ ಅರಳಿದೆ ! ಹಿಗ್ಗಿ, ಹೇಗೆ ಅರಳಿದೆ !
ಹೂವಿನೋಕುಳಿಯಲಿ ಮಿಂದ ಹಾಗೆ ಅರಳಿದೆ.

ಹೇಗೆ ಸುರಿಸಿದ ! ಒಲವ ಹೇಗೆ ಸುರಿಸಿದ !
ಆಗುಂಬೆಯ ಹುಚ್ಚು ಮಳೆಯ ಹಾಗೆ ಸುರಿಸಿದ.
ಏನು ಫಲಿಸಿತು ? ನನ್ನೊಳೇನು ಫಲಿಸಿತು ?
ಜೊಂಪೆ ಜೊಂಪೆ ಹಣ್ಣು ತೂಗಿ ಜೀವ ಫಲಿಸಿತು.

ಏನು ತುಂಬಿತು ? ಎದೆಯೊಳೇನು ತುಂಬಿತು ?
ನೂರು ಹಕ್ಕಿ ಹೈಕಳುಗಳ ಹಾಡು ತುಂಬಿತು.
ಏನಾದೆನು ? ನಾನೇನಾದೆನು?
ಸುತ್ತ ತಂಪು ನೆರಳು ಹರಡಿ ಧನ್ಯಳಾದೆನು.

—ಬಿ. ಆರ್. ಲಕ್ಷ್ಮಣರಾವ್.

## ಭರವಸೆ

ಆಗು, ಗೆಳೆಯ, ಆಗು ನೀನು ಭರವಸೆಯ ಪ್ರವಾದಿ.
ಹತಾಶೆಯಲ್ಲೇನಿದೆ? ಬರೀ ಶೂನ್ಯ, ಬರೀ ಬೂದಿ.

ಕೊಟ್ಟಿದಷ್ಟೂ ಹೆಚ್ಚಿ ಬರುವ ಸೃಷ್ಟಿಶೀಲ ಪ್ರಕೃತಿ,
ಉಬ್ಬೆಯಲ್ಲೂ ಹುಳಿ ನೀಗಿದ ಸಿಹಿ ಹಣ್ಣಿನ ಪ್ರೀತಿ,
ಅದುಮಿದಷ್ಟೂ ಚಿಮ್ಮಿ ಬರುವ ಚೈತನ್ಯದ ಚಿಲುಮೆ,
ಇಂದು ನಮ್ಮ ಯತ್ನಗಳಿಗೆ ಇವೇ ತಕ್ಕ ಪ್ರತಿಮೆ.

ಜೋಪಡಿಯಲೂ ಜೋಗುಳ, ಅಂಗಳದಲಿ ಹೂ ಹಸೆ,
ಕೊಳೆಗೇರಿಯ ಕೊಚ್ಚೆಯಲ್ಲೂ ಮಗು ಗುಲಾಬಿ ನಗೆ,
ಚಿಂದಿಯಲ್ಲೂ ಹಿಗ್ಗಿ ಹರೆಯ, ನೂರು ಕನಸು ಕವಿತೆ,
ಹಟ್ಟಿಯಲ್ಲೂ ಹುಟ್ಟು ಹಬ್ಬ, ಮುಂಬೆಳಗಿನ ಹಣತೆ.

ಮಾನವತೆಯ ಕಟ್ಟಡಕ್ಕೆ ಪ್ರೀತಿಯೊಂದೇ ಇಟ್ಟಿಗೆ,
ಇಟ್ಟಿಗೆಗಳ ಬೆಸಯಬೇಕು ಕರುಣೆ ಸ್ನೇಹದೊಟ್ಟಿಗೆ,
ಸುತ್ತ ನೋವು ನೀಗಿದಾಗ ನಿನ್ನ ನಗೆಗೂ ಅರ್ಥ,
ಇಲ್ಲದಿರಲು ನಿನ್ನ ಈ ಹತಾಶೆ ಕೂಡ ಸ್ವಾರ್ಥ.

—ಬಿ. ಆರ್. ಲಕ್ಷ್ಮಣರಾವ್

(ಕೃಪೆ : ಆಕಾಶವಾಣಿ, ಬೆಂಗಳೂರು.)

## ಓ ಲಕ್ಷ್ಮಣಾ ! ಹಾ ಸೀತಾ !

"ಓ ಲಕ್ಷ್ಮಣಾ ! ಹಾ ಸೀತಾ !"

*

ಬಳಲುತಿದೆ ನನ್ನ ಶಿವಮೊಗ್ಗ
ಏರುತಿದೆ ಜ್ವರ ಮೆಲ್ಲಮೆಲ್ಲಗೆ
ಅದನು ಅವುಚಿ ಪೊರೆಯುವ ಗಿರಿ ತಪ್ಪಲುಗಳ ಗಾಳಿಮೈ
ಕಾದು ಕೆಂಪಗೆ ಜಿನುಗತಿದೆ ಬೆವರ ಹನಿ
ಕಂಗೆಟ್ಟ ಹುಡುಗ ಹುಡುಗಿಯರ ನೀಲ ಹರೆಯದ

ಕಂಪಿಸುವ ಬೆರಳತುದಿಗಳಲ್ಲಿ, ಅಲುಗದ ಕಣ್ಣ ಎಲೆಗಳಲ್ಲಿ;
ನೆಹರೂ ರಸ್ತೆ ತುಂಬಿ ನರ್ತಿಸುತಿದೆ ಗರಬಡಿದ ಕಾಲುಗಳಲ್ಲಿ:
ವನದಲ್ಲಿ ಬಣ್ಣಬಿಟ್ಟ ಹೂರಾಶಿ ಬಾಡಿದೆ ಕಾಲ ತಳಗಿನ
ಹಸಿರುಗರಿಕೆಯ ನಿಟ್ಟುಸಿರ ಕಾವಿನಲ್ಲಿ;
ಕೊಂಬೆಮರೆಯುಲಿ ಹೆಸರು ಮರೆತ ಹಕ್ಕಿಗಳು ಕೂಗುತಿವೆ
ದೂರದಲಿ ಉರುಳು ರೈಲುಬಂಡಿಯು ಒರಟುಲಯದಲ್ಲಿ:
ಅದೋ ಬೆಂಕಿಯಿಲ್ಲದ ಸೂರ್ಯ ಮುಳುಗೆದ್ದು ತೇಲುತ್ತಿದ್ದಾನೆ
ಬದುಕೆಂಬ ಸಾವಿನಲ್ಲಿ
ದಾಹ ಹಿಂಗದ ತುಂಗೆಯ ಸ್ತಬ್ಧ ಜಲರಾಶಿಯಲ್ಲಿ.

ನನ್ನ ಶಿವಮೊಗ್ಗೆ ಬಿದ್ದೆದ್ದು ನರಳುತಿದೆ
ಒಳಗೆ ಕಾವು. ತಿದಿಯೊತ್ತುವ ನೋವು
ಹೊರಗೆ ಹೆಡೆಬಿಚ್ಚಿನಿಂತ ಸುರಸುಂದರ ಹಾವು
ಯಾರಿಗೆ ಹೇಳಲಿ?

ಬಾಯಿ ತೆರೆಯಿತು ಹೊರಡಲಿಲ್ಲ ಮಾತು:
ಮಾತು ಜ್ಯೋತಿರ್ಲಿಂಗದ ಸುತ್ತ ಹುತ್ತಗಟ್ಟಿದ ರೋಷ
ಬಾಯಿ ಬರೀ ಬಾಯಿಗಳ ಸಾಮ್ರಾಜ್ಯ ಉರುಳಿದರೂ ವರುಷವರುಷ !
ಅವುಡುಗಚ್ಚಿದ ದವಡೆ ಬಿಗಿದ ಮುಷ್ಟಿಯೊಳಗೆ
ಉಸಿರುಗಟ್ಟಿದ ಉಸಿರು
ಭಯವಿಲ್ಲದ ಭಯ
ತುಂತುಂಬಿಕೊಂಡ ಶೂನ್ಯ
ಎಲ್ಲ ಬಟಾ ಬಯಲು

ಬಯಲು ಆಲಯವಾಗಲಿಲ್ಲ
ಆಲಯವೂ ಬಯಲಾಗಲಿಲ್ಲ:
ವೇದಘೋಷಗಳ ಒಡಲಿಂದ
ಅರ್ಥವೊಂದೂ ಒಡೆಯಲಿಲ್ಲ
ಘಂಟೆಗಳಲ್ಲಿ ಸದ್ದಲ್ಲಿ ನಾದಮಾತ್ರ ಮೂಡಲಿಲ್ಲ
ಅಳುವ ಹಸುಳೆಗಳ ಅಮ್ಮಂದಿರ
ತುಂಬು ಎದೆಗಳಲ್ಲಿ ಹಾಡು ಹೊಮ್ಮಲಿಲ್ಲ
ಕುಶಲವರ ಬಾಯಿಗೆ ತೊಟ್ಟು ಹಾಲೂ ದಕ್ಕಲಿಲ್ಲ

ಮುಗಿದಿಲ್ಲ ಇನ್ನೂ ಶತ್ರುನಾಶದ ಸಮರ
ಮುಗಿದಿಲ್ಲ ಇನ್ನೂ ಶೂದ್ರತಪಸ್ವಿಗಳಹಂಕಾರ–
ರಾಮ ಲಕ್ಷ್ಮಣರ ಬತ್ತಳಿಕೆ ಇನ್ನೂ ಬರಿದಾಗಲಿಲ್ಲ...
ವಸಿಷ್ಠರಾಜ್ಞೆಗೆ ಕೊನೆಯೆಂಬುದೇ ಇಲ್ಲ...
ಮುಗಿಲ ಮುಟ್ಟುತಿದೆ ಸೀತೆಯ ನಿಟ್ಟುಸಿರುಗಳ ಜ್ವಾಲೆ
ಶಿವಮೊಗ್ಗೆ ಹೊತ್ತಿ ಉರಿಯಲಿದೆ ನಾಳೆ...

*

"ಓ ಲಕ್ಷ್ಮಣಾ! ಹಾ ಸೀತಾ!"

—ಡಿ. ಎಸ್. ನಾಗಭೂಷಣ

## ಎರಡು ಕಥೆಗಳು

### ಒಂದು

ಕಾಳೇ ಇಲ್ಲದ ಮನೆಯಲ್ಲಿ
ಕಾಲನೆಡಗೆ ಗಂಡ
ಹೊರಟು ನಿಂತಿದ್ದ ರಾತ್ರಿ
ಕೂಳೇ ಇಲ್ಲದ ಮೂರುದಿನದ
ಉಪವಾಸದಲ್ಲಿ ಹೆಂಡತಿ
ಮಲಗಿದ್ದಾಳೆ.
ಹೊಟ್ಟೆಗಾನಿಸಿ ಮಕ್ಕಳನ್ನು
ಅಪ್ಪಿ ಹಿಡಿದಿದ್ದಾಳೆ.

ಸರಿಹೊತ್ತಿನಲ್ಲಿ ಗಂಡ ಕೇಳಿದ ಕಾಫಿ
ಕೂಸ ಬಾಯಿಂದ ತೊಟ್ಟು ಬಿಡಿಸಿ
ಎದ್ದು ಹೋಗಿ ಕಾಸಿಬಸಿದು
ಕಾಫಿ ಹನಿಗಳ ತಂದಳು
ಈಗ ಕೂಸು ಅತ್ತರೆ
ಅವಳಲ್ಲಿ ಉತ್ತರವಿಲ್ಲ.

ಎರಡು

ಬಾಳುಸಿಗದ ಮನೆಯಲ್ಲಿ
ಬದುಕಿರುವ ಗಂಡ
ಏದುಸಿರು ಬಿಡುತ್ತಿದ್ದಾನೆ
ಶೋಕಿ ಓಡಾಟದ ಮಧ್ಯಬಿಡುವಲ್ಲಿ
ಅವಸರದ ಹೆಂಡತಿ
ಸೀಸೆ ತುಂಬಿಸಿ ಕೂಸಬಾಯಿಗೆ
ರಬ್ಬರ್ ನಿಪ್ಪಲ್ ಹಚ್ಚುತ್ತಾಳೆ.
ಹಾಸಿಗೆಯಲ್ಲಿ ಹೆಂಡತಿಯನ್ನು
ಕಂಡೇ ಇರದ ಗಂಡನಿಗೆ
ರಾತ್ರಿ ಇಲ್ಲದ ಸೊಳ್ಳೆಗಳ ಕಡಿತ

ದಿನಾ ಹೊತ್ತುತಪ್ಪಿ ಬಂದು
ಗಂಡನ ಬಾಯಿಮುಚ್ಚಿಸುತ್ತಿದ್ದ
ಅವಳು ಇಂದು
ನಿರಿಗೆ ಬಿಗಿದರೇ ಓಕರಿಕೆ
ಈಗ ಗಂಡ ನಕ್ಕರೆ
ಅವಳಲ್ಲಿ ಉತ್ತರವಿಲ್ಲ

—ಹ. ನೆಂ. ವೇಣುಗೋಪಾಲ

## ಈ ಹುಡುಗನ ಕ್ರಾಂತಿ ಪಾಠಗಳಿಂದ ಹೆಕ್ಕಿದ್ದು:

ಪಾಠ-೧

ಬಿಸಿ-
ಬಿಸಿಯ ಹುಡುಗನೆಳೆ-
ತಲೆಯ
ಒಳಗಿನಸಂಖ್ಯೆ ಕೊತ ಕೊತ
ಕುದಿತಗಳು,
ಮತ್ತು

ಜಬರುದಸ್ತಿನ ಹೂಂಕಾರಕ್ಕೆ
ಹೆದರಿ,
ಮಣ್ಣಲ್ಲಿ ಹೊರಳಿ,
ಉದ್ದಕ್ಕೂ
ದೀರ್ಘದಂಡ ಬೀಳುವ
ಕರಿಯ-
ದೇಹಗಳ ಅಪ್ಪ ಅಮ್ಮರು,
ಮತ್ತವರ-
ಜಬರು[illegible]ಣ್ಣಲ್ಲಿ ಫಿ[illegible]ಳಿಡುವ
ಆಸೆಗಳು
ಕೆಂದುತ್ತ ಬಂದಕ್ಷಣ
ಈ ಹುಡುಗ
ಕಾರ್ಯ ಸನ್ನದ್ಧ.

## ಪಾಠ–೨

ಪ್ರೀತಿಸುವ
ಅಪ್ಪಿ ಮುದ್ದಾಡಿ ಮುಸುಗರೆದು ಕಾತರಿಸಿ
ಕಾಪಿಡುವ
ಮೃದು ಮಧುರ ಕೋಮಲ
ಮಂದಸ್ಮಿತ
ಜಘನ ಹೆಣ್ಗಳ ಬಾಹುಗಳ ಬಂಧಿ,
ಅಲ್ಲಿಂದಲೇ
ಕೆಂಗಣ್ಣಲ್ಲಿ ಕೆಂಪು ಚೀರನು ಚೀರಿ
ವಿಹ್ವಲನಾಗುತ್ತಾನೆ.
ವೇದಿಕೆಯಿಂದೊಮ್ಮೊಮ್ಮೆ
ಇದ್ದ ಬದ್ದ ಸರಕನೆಲ್ಲ
ಉಗ್ಗಡಿಸಿ
ಹಲವರ ಕಿವಿಗಳಲ್ಲಿ ಉಡಾಫೆಯಿಂದ
ಮೊರೆವ

ರಾಜಕಾರಣಿಯ ಭಾಷಣವಾಗುತ್ತಾನೆ.

ಪಾಠ—೩

ಪೂರ್ವದ
ಬಾನಂಚಲ್ಲಿ ಸೂರ್ಯ
ಚೆಲ್ಲಿದ ಕೆಂಪು ಕ್ರಮೇಣ ಕರಗಿ
ಈಗೆಲ್ಲ ನಿಚ್ಚಳ,
ಈ ಹುಡುಗ–
ನೀಗ ಕಂಡ ಕಂಡವರನ್ನು
ಅನುಮಾನಿಸುವ
ಗಾಢ ನಿಶಬ್ಧ ನೀರವತೆಯೊಂದಿಗೆ
ನೆನಪುಗಳ
ಬಗೆಯುತ್ತಾ ಕೂತ ಮೌನಿ.

—ನಟರಾಜ ಹೊನ್ನವಳ್ಳಿ.

## ಬಿಳಿಗೂದಲು ಮತ್ತು ಬೆಪ್ಪುಭರತ

ಬಿಳಿನೆರೆಯ ಕಂಡ ಭರತ ಚಕ್ರಿ ಬೆಚ್ಚಿ
ಪತ್ನಿಯರ ಪತ್ತಲಗಳಡಿ
ಮಡುಗಟ್ಟಿ ಮೊಗ್ಗಾಗಿ
ಒಂದೊಂದೂ ಚಿಗುರಿನಸಂಖ್ಯ ಎಲೆಗಳ
ಮೇಲೆ ಮುತ್ತಿನ ಮಾಲೆ ಹಾಕುತ್ತಾ
ಬೆಳ್ಳಕ್ಕಿ ಸಾಲಿನಂತೆ ಈಸಿದೆಡೆಯೆಲ್ಲಾ
ಸರಾಗವಾಗಿ ಕೊಚ್ಚಿ ಕೊಂಡೊಯ್ಯುತ್ತಿದ್ದ ಕಾಮಕೇಳಿಗೆ
ಅಣೆಕಟ್ಟಾಯ್ತಲ್ಲಾ
ಎಂದು ಕೊಳ್ಳುತ್ತಿದಂತೆ

ಒಡಮುಡಕೆಯೊಳಗಿಂದ ಜೇನುಸುರಿದು
ಒಣಗಿ ಬಾಯ್ಬಿಟ್ಟ ಭೂಮಿಯಲಿ ಬೊಗಸೆನಿಂತಿತು
ಪ್ರತಿಬಿಂಬ ಕೂಡ ಮಸುಕಾಪಾಗ
ಭರತನಿಗೆ ನೆನಪಾದದ್ದೊಂದೇ—ವಿ
ಮುಕ್ತಿ !

ಪಾಪ ಅವಗೆ ಗೊತ್ತಿರಲಿಲ್ಲ
ಹೇರ್‌ಡ್ರೈನಿಂದ ಪಕ್ಷಿಯರ ಹಾಸ್ಯ ಮೂದಲಿಕೆಯಿಂದ
ಇನ್ನಷ್ಟು ವರುಷ ಹಾರಬಹುದಿತ್ತೆಂಬ ರಹಸ್ಯ !

ಕೆನ್ನೆಯಲಿ ಕಂಡ ಬರೀ ಒಂದು ನೆರೆಗೂದಲಿಗೇ
ಭರತ ಬೆಚ್ಚಿದ್ದು ಎಂಥ ವಿಪರ್ಯಾಸ !

ತಲೆಗೂದಲೊಂದೊಂದನೇ ಕೀಳಿಸಿಕೊಂಡು
ಕೈವಲ್ಯ ಪಡೆಯಲು ಹೋಗುವ ಅವನ ಪಾಡು
ಅಂತಿರಲಿ,
ತೊಂಬತ್ತಾರು ಸಹಸ್ರ ಹೆಣ್ಣುಗಳ ಕನಸು
ಕಾರಂಜಿಯ ಉತ್ಸಾಹಕ್ಕೆ
ಕೊಳ್ಳಿಯಾಯ್ತು ಆ ಹಾಳು ನೆರೆಗೂದಲು !

—ಸುವರ್ಣ ಕಾಡನಕುಪ್ಪೆ.

ಮತಧರ್ಮವನ್ನು ಬಿಟ್ಟ ರಾಜಕೀಯ ಸಾವಿನ ಬಲಿಯೇ ಸರಿ. ಏಕೆಂದರೆ ಅದು ಆತ್ಮವನ್ನು ಕೊಲ್ಲುತ್ತದೆ.

—ಗಾಂಧೀಜಿ

# ಕಲಿಕೆಯ ಹಕ್ಕಿನ ಹೋರಾಟಗಾರ

---

ಶಿವರಾಮ ಕಾರಂತರ ಈ ಸಂದರ್ಶನವನ್ನು ಶ್ರೀಶ್ ಚೌಧುರಿಯವರು ಹಿಂದೂ ಪತ್ರಿಕೆಗೆ ನಡೆಸಿಕೊಟ್ಟಿದ್ದರು. ಚೌಧುರಿಯವರು ಹೈದರಾಬಾದಿನ ಕೇಂದ್ರೀಯ ಇಂಗ್ಲಿಷ್ ಹಾಗೂ ವಿದೇಶಿ ಭಾಷಾಸಂಸ್ಥೆಯಲ್ಲಿ ರಿಸರ್ಚ್ ಫೆಲೋ ಆಗಿದ್ದಾರೆ. ಈ ಲೇಖನವನ್ನು ಉಡುಪಿಯ ಮಹಾಬಲೇಶ್ವರ ರಾವ್ ಅವರು ಅನುವಾದಿಸಿಕೊಟ್ಟಿದ್ದಾರೆ. ಇವರಿಗೆಲ್ಲ ಶೂದ್ರ ಋಣಿಯಾಗಿದೆ.

---

ಪ್ರಶ್ನೆ : ನಿಮ್ಮ ದೃಷ್ಟಿಯಲ್ಲಿ ಭಾರತೀಯ ಇಂಗ್ಲಿಷ್ ಅಂದರೇನು ? ಬೇರೆಯೇ ಆದ ಉಚ್ಚಾರ ಅಥವಾ ವಾಕ್ಯರಚನೆ ಎಂದರ್ಥವೆ ?

ಉತ್ತರ : ನಾವು ಇಂಗ್ಲಿಷನ್ನು 'ಈಡಿಯಮ್ಯಾಟಿಕ್' ಆಗಿ ಬಳಸುತ್ತಿಲ್ಲ. ನಾವು ಶಬ್ದಗಳನ್ನು ಅವುಗಳ ನಿಜವಾದ ಅರ್ಥದ ಛಾಯೆಯಲ್ಲಿ ಪ್ರಯೋಗಿಸುತ್ತಿಲ್ಲ. ಇಂಗ್ಲಿಷನ್ನು ನಾವು ಪಠ್ಯಪುಸ್ತಕಗಳಿಂದ ಕಲಿಯುತ್ತೇವೆ. ಮಾತೃಭಾಷೆ ಇಂಗ್ಲಿಷ್ ಆಗಿರುವ ಜನರ ಜೊತೆ ನೀವು ಬದುಕದೆ ಅದರ ಸರಿಯಾದ ಪ್ರಯೋಗ ನಿಮಗೆ ತಿಳಿಯುವುದಿಲ್ಲ. ನಾನು ಹೇಳುತ್ತೇನೆ—ಭಾಷೆಯನ್ನು ಪುಸ್ತಕಗಳ ಮುಖೇನ ಎಂದೂ ಕಲಿಯಬೇಡಿ. ಅದು ಭಾಷೆಯನ್ನು ಕಲಿಯುವ ತಪ್ಪು ವಿಧಾನ. ಒಂದು ಭಾಷೆಯನ್ನು ಕಲಿಸುವುದಕ್ಕೆ ನೀವು ಇಪ್ಪತ್ತು ವರ್ಷ ತೆಗೆದುಕೊಳ್ಳುತ್ತೀರಿ. ಆದರೂ ಪರಿಣಾಮ ಏನು ? ಇಂಗ್ಲಿಷ್ ಕೃತಿಗಳನ್ನು ಕನ್ನಡಕ್ಕೆ ತರ್ಜುಮೆ ಮಾಡುವಾಗ ನನಗೆ ಇದು ಅನುಭವಕ್ಕೆ ಬಂದಿದೆ. ಇಂಗ್ಲಿಷ್‌ನ ಅನೇಕ ಅಭಿವ್ಯಕ್ತಿಗಳಿಗೆ ಕನ್ನಡದಲ್ಲಿ ಸಮರ್ಪಕವಾದ ಪರ್ಯಾಯ ಪದಗಳನ್ನು ಕಂಡುಕೊಳ್ಳುವುದು ಎಷ್ಟೋ ವೇಳೆ ಕಷ್ಟ. ಅದರ ರೂಪಕಗಳು ನುಡಿಗಟ್ಟುಗಳು, ಪ್ರತಿಮೆಗಳು ತುಂಬ ಭಿನ್ನ.

ಪ್ರಶ್ನೆ : ಇಂಗ್ಲಿಷ್‌ನ ನುಡಿಗಟ್ಟುಗಳಿಗೆ ಕನ್ನಡದಲ್ಲಿ ಪರ್ಯಾಯ ಪದಗಳನ್ನು ಕಂಡುಕೊಳ್ಳುವುದು ಕಷ್ಟ ಅಂತ ನೀವು ಹೇಳಿದಿರಿ. ಸೃಜನಶೀಲ ಬರವಣಿಗೆಯ ನಿಮ್ಮ ಅನುಭವದ ಜೊತೆ ಹೋಲಿಸಿದರೆ ಅನುವಾದ ಕಾರ್ಯ ಕಷ್ಟಕರ

ಅದರಲ್ಲೂ ಮುಖ್ಯವಾಗಿ ಇಂಗ್ಲಿಷ್‌ನ ತಾಂತ್ರಿಕ ಪದಗಳಿಗೆ ಕನ್ನಡದಲ್ಲಿ ಪರ್ಯಾಯ ಪದಗಳನ್ನು ಹುಡುಕುವುದು ನೋವಿನ ಸಂಗತಿ ಅನ್ನಿಸುವುದಿಲ್ಲವೆ ?

ಉತ್ತರ : ನನಗೆ ಅಂತ ನೋವಿನ ಅನುಭವ ಆಗಿಲ್ಲ. ನೀವು ಒಂದು ಕೆಲಸವನ್ನು ಇಷ್ಟಪಟ್ಟರೆ, ಅದರಲ್ಲಿ ಆಸಕ್ತಿ ಇದ್ದರೆ ಯಾವುದೇ ನೋವಿನ ಪ್ರಶ್ನೆ ಅಲ್ಲಿರುವುದಿಲ್ಲ. ಸರಿಯಾದ ಪರ್ಯಾಯ ಪದಗಳು ಇಲ್ಲದಿದ್ದರೆ ಅನ್ಯದೇಶ ಪದಗಳನ್ನು ಹಾಗೆ ಹಾಗೆಯೇ ಬಳಸಬಹುದು. ಹಾಗೆ ನೋಡಿದರೆ, ನಮ್ಮ ಭಾಷೆ ನಮ್ಮದೇ ಪದಗಳನ್ನು ಹೊಂದಿರುವ ಹಾಗೆಯೇ ಕಡತಂದ ಪದಗಳನ್ನು ಒಳಗೊಂಡಿದೆ. ಪ್ರತಿಯೊಂದು ಅನ್ಯದೇಶ್ಯ ಪದವನ್ನು ಭಾಷಾಂತರಿಸಬೇಕು ಅಂತ ಯಾರು ಹೇಳ್ತಾರೆ ?

ಪ್ರಶ್ನೆ : ನಿಮ್ಮಲ್ಲಿಗೆ ಬರುವಾಗ ಎಲ್ಲಿಯೋ ಒಂದು ಕಡೆ ಟೆಲಿಫೋನ್ ಎಕ್ಸ್‌ಚೇಂಜ್‌ನ ಹಿಂದಿ ರೂಪಾಂತರ 'ದೂರವಾಣಿ ವಿನಿಮಯ ಕೇಂದ್ರ' ಅಂತ ನೋಡಿದೆ. ಇಂಥ ಅನುವಾದಕ್ಕೆ ನಿಮ್ಮ ಪ್ರತಿಕ್ರಿಯೆ ಏನು ?

ಉತ್ತರ : ಇಂಥ ಕ್ಲಿಷ್ಟವಾದ ಅನುವಾದಗಳನ್ನು ನಾನು ಮೆಚ್ಚುವುದಿಲ್ಲ. ನೋಡಿ, ಪ್ರತಿಯೊಂದು ಪದವನ್ನು ನೀವು ಅನುವಾದಿಸಬೇಕಾಗಿಲ್ಲ. ಮೂಲಭೂತವಾಗಿ ಒಂದು ಭಾಷೆ ಜನರಿಗೆ ವಿಚಾರಗಳನ್ನು ಮುಟ್ಟಿಸಬೇಕು. ಅದು ಸಂಹವನದ ಮಾಧ್ಯಮ. ಅದು ಸುಲಭಗೊಳಿಸಿ 'ನಾವೆಲ್' ಎನ್ನುವ ಪದಕ್ಕೆ ಕನ್ನಡದಲ್ಲಿ ಪರ್ಯಾಯ ಪದ ಹುಡುಕುವ ಪ್ರಶ್ನೆ ಎದ್ದಿತ್ತು. ತೆಲುಗು ಮತ್ತು ಹಿಂದಿಯಲ್ಲಿ ಅವರು 'ಉಪನ್ಯಾಸ್' ಎಂಬ ಪದವನ್ನು ಒಪ್ಪಿಕೊಂಡರು. ಉಪನ್ಯಾಸ್ ಎಂದರೆ ಹತ್ತಿರ ಬರುವುದು ಎಂದರ್ಥವಾಗುತ್ತದೆ. ಆದರೆ ಅದರಿಂದ ಬಹಳ ಏನೂ ವ್ಯತ್ಯಾಸ ಆಗೋದಿಲ್ಲ. ಜನರಿಗೆ ಅದೇನೂಂತ ಗೊತ್ತಿತ್ತು. ಕನ್ನಡದಲ್ಲಾದರೋ ಮೊದಲ ನಾವೆಲ್ ಬಾಣಭಟ್ಟನ 'ಕಾದಂಬರಿ'ಯ ಅನುವಾದ. ನಂತರದ ಎಲ್ಲಾ ನಾವೆಲ್‌ಗಳನ್ನು 'ಕಾದಂಬರಿ' ಎಂದೇ ಕರೆದರು,

ಪ್ರಶ್ನೆ : ನಿಮ್ಮ ಓದಿನ ಭಾಷೆ ಯಾವುದು ?

ಉತ್ತರ : ಹೆಚ್ಚಾಗಿ ಇಂಗ್ಲಿಷ್. ಸ್ವಲ್ಪಮಟ್ಟಿಗೆ ಕನ್ನಡ. ನಾನು ಬಯಸುವ ಬೌದ್ಧಿಕ ಗ್ರಾಸವನ್ನು ಒದಗಿಸಲು ಕನ್ನಡಕ್ಕೆ ಸಾಧ್ಯವಾಗಿಲ್ಲ. ನೋಡಿ, ನಾನೀಗ ರಿಚರ್ಡ್ ಈ. ಲೀಕಿ ಬರೆದಿರುವ 'The making of mankind' ಓದುತ್ತಿದ್ದೇನೆ. ಇಂಥ ಪುಸ್ತಕಗಳು ನಮ್ಮ ಭಾಷೆಗಳಲ್ಲಿಲ್ಲ. ನಾವು ಪಠ್ಯಪುಸ್ತಕಗಳಿಗಿಂತ ಬಹಳ ದೂರ ಏನೂ ಹೋಗಿಲ್ಲ.

ಪ್ರಶ್ನೆ : ನಿಮ್ಮ ಮಕ್ಕಳು ಸಣ್ಣವರಿದ್ದಾಗ ಅವರಿಗಾಗಿ ನೀವು ಎಂಥ ಪುಸ್ತಕ ಮತ್ತು ಪತ್ರಿಕೆಗಳನ್ನು ಶಿಫಾರಸು ಮಾಡುತ್ತಿದ್ದಿರಿ ಎಂಬುದನ್ನು ಹೇಳಬಹುದೆ ?

ಉತ್ತರ : "ಈ ಪುಸ್ತಕ ಓದಿ. ಆ ಪುಸ್ತಕ ಓದಿ" ಅಂತ ಹೇಳುವುದರಲ್ಲಿ ನನಗೆ ಅಷ್ಟು ಆಸಕ್ತಿ ಇದ್ದಿರಲಿಲ್ಲ. ಜ್ಞಾನದ ಬಗೆಗೆ ಕಾಳಜಿ ಹುಟ್ಟಿಸುವುದು ನನಗೆ ಮುಖ್ಯವಾಗಿತ್ತು. ಇದಕ್ಕಾಗಿ ಅವರು ಶಾಲೆಗೆ ಹೋಗಬೇಕಾಗಿಲ್ಲ. ಹಾಗೆ ನೋಡಿದರೆ, ಶಾಲೆಯಲ್ಲಿ ಭಾಷೆಯನ್ನು ಕಲಿಸುವುದು ಬಹಳ ನಿರಾಶಾದಾಯಕ ಸಂಗತಿ. ನಿಮಗೆ ಇಂಗ್ಲಿಷ್ ಕಲಿಸಬೇಕೆಂದಿದ್ದರೆ ಅದನ್ನೊಂದು ಜೀವಂತ ಭಾಷೆ ಎಂದು ಪರಿಗಣಿಸಿ. ಒಂದು ಭಾಷೆಯನ್ನು ಕಲಿಸುವುದಕ್ಕೆ ಸಾಕಷ್ಟು ವರ್ಷ ಹಿಡಿಯುತ್ತದೆ. ಅಷ್ಟಾದರೂ ಅದು ಸಾಲದು. ಆ ರೀತಿ ಕಲಿಸುವುದು ಕೂಡಾ ಮೂರ್ಖತನ. 5ನೇ ಕ್ಲಾಸಿಗೆ ಸೇರುವ ಪ್ರಾಯ ಆಗುವವರೆಗೆ ನಾನು ನನ್ನ ಮಕ್ಕಳನ್ನು ಪ್ರಾಥಮಿಕ ಶಾಲೆಗೆ ಕಳಿಸಲಿಲ್ಲ. ಅವರಿಗೆ ಎಲ್ಲವನ್ನೂ ನಾನು ಮನೆಯಲ್ಲೇ ಕಲಿಸಿದೆ. ಅವರಿಗೆ ಪ್ರತಿದಿನ ಒಂದು ಗಂಟೆ ಕಥೆ ಹೇಳುತ್ತಿದ್ದೆ. ನಂತರ ಆಡಲು, ಪ್ರಕೃತಿಯೊಂದಿಗೆ ಸಾಧ್ಯವಾದಷ್ಟು ನಿಕಟ ಸಂಪರ್ಕ ಹೊಂದಲು ಬಿಡುತ್ತಿದ್ದೆ.

ಪ್ರಶ್ನೆ : ಶೈಕ್ಷಣಿಕ ಉದ್ದೇಶಗಳಿಗಾಗಿ ಚಲನಚಿತ್ರಗಳು ಟೆಲಿವಿಶನ್ ಮತ್ತು ಇನ್ನಿತರ ದೃಕ್-ಶ್ರವಣ ಸಾಧನಗಳ ಬಳಕೆಯ ಬಗ್ಗೆ ನಿಮ್ಮ ಅನ್ನಿಸಿಕೆ ಏನು ? ಈ ಪ್ರಶ್ನೆ ಕೇಳುವಾಗ—ಈ ಸಾಧನಗಳ ಬಗ್ಗೆ ವ್ಯಯವಾಗುವ ಅಪಾರ ಹಣ ಮತ್ತು ನಮ್ಮೆಲ್ಲ ಶಾಲಾ ಮಕ್ಕಳಿಗೆ ಪಠ್ಯಪುಸ್ತಕ ಒದಗಿಸಲು ನಮಗಿನ್ನು ಸಾಧ್ಯವಾಗಿಲ್ಲ ಎಂಬ ಸಂಗತಿ ನನ್ನ ತಲೆಯಲ್ಲಿದೆ.

ಉತ್ತರ : ನಿಮಗೇನು ಬೇಕು ? — ನೀವು ಅವರನ್ನು ಶಿಕ್ಷಿತರನ್ನಾಗಿ ಮಾಡಲು ಬಯಸುತ್ತೀರೋ ಅಥವಾ ಅವರು ಪುಸ್ತಕ ಓದುವುದನ್ನು ಅಪೇಕ್ಷಿಸುತ್ತೀರೋ? ಅರ್ಧಗಂಟೆ ಒಂದು ಚಿತ್ರ ನೋಡುವುದು—ವರ್ಷವಿಡೀ ಒಂದು ಪುಸ್ತಕ ಓದುವುದಕ್ಕಿಂತ ಹೆಚ್ಚಿನದನ್ನು ಅವರಿಗೆ ಕಲಿಸುತ್ತದೆ. ಅವರಿಗೆ ಒಳ್ಳೆಯ ಚಿತ್ರ ತೋರಿಸಿ ಮತ್ತು ಸುತ್ತಲಿನ ಪ್ರಪಂಚವ ಕುರಿತು ಕಲಿಯುವ ಆಸಕ್ತಿ ಬೆಳೆಸಿ. ಇದರ ಪರಿಣಾಮವನ್ನು ಆಮೇಲೆ ನೋಡಿ. ನಾವು ಇದರಲ್ಲಿ ಯಶಸ್ವಿಯಾಗಿಲ್ಲ. ಏಕೆಂದರೆ ಫಿಲ್ಮ್‌ಗಳನ್ನು ನಾವು ಸರಿಯಾಗಿ ಬಳಸಿಕೊಂಡಿಲ್ಲ. ನಾವು ಎಲ್ಲವನ್ನೂ ತಪ್ಪಾಗಿ ಉಪಯೋಗಿಸಿಕೊಳ್ಳಬಲ್ಲೆವು.

ಪ್ರಶ್ನೆ : ಈಗ ನಾವು ಶಿಕ್ಷಣ ಮತ್ತು ಭಾಷಾ ಧೋರಣೆಯ ಬಗ್ಗೆ ಮಾತನಾಡುವ

ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದ ಹಾಗೆ ನಿಮ್ಮ ದೃಷ್ಟಿಯಲ್ಲಿ ಸೂಕ್ತ ಭಾಷೆ ಯಾವುದು ?

ಉತ್ತರ : ಮಾತೃ ಭಾಷೆ. ಅದು ಮಗುವಿನ ಮೇಲಿನ ಭೌಗೋಳಿಕ ಒತ್ತಾಯ ಕೂಡ. ಮಗುವಿನ ಮೇಲೆ ಹಲವಾರು ಭಾಷೆಗಳನ್ನು ಹೇರಬೇಡಿ. ಪ್ರಪಂಚ ದೊಡನೆ ಆತ ಸಂಪರ್ಕ ಬೆಳೆಸಿಕೊಳ್ಳಲಿ ; ತನ್ನ ಯೋಚನಾ ಶಕ್ತಿಯನ್ನು ಬೆಳೆಸಿ ಕೊಳ್ಳಲಿ. ಒಂದು ಸಲಕ್ಕೆ ಒಂದು ಭಾಷೆ ಸಾಕು. ಅಲ್ಲದೆ ನಮ್ಮ ದೇಶದಲ್ಲಿ ಭಾಷಾ ಸ್ವಾತಂತ್ರ್ಯ ಸಂವಿಧಾನ ದತ್ತವಾಗಿದೆ. ಒಂದು ನಿರ್ದಿಷ್ಟ ಭಾಷೆ ಯನ್ನು ಕಲಿಯಬೇಕು ಅಥವಾ ನಿರ್ದಿಷ್ಟ ಬಾಷೆಯ ಮೂಲಕವೇ ಕಲಿಯಬೇಕು ಎಂದು ನೀವು ಯಾರನ್ನೂ ಒತ್ತಾಯಿಸುವ ಹಾಗಿಲ್ಲ. ಕರ್ನಾಟಕದಲ್ಲೇ 30 ಉಪಭಾಷೆಗಳಿವೆ. ನಮ್ಮ ಮಕ್ಕಳು ಯಾವ ಉಪಭಾಷೆಯನ್ನು ಕಲಿಯ ಬೇಕೆಂದು ನೀವು ಬಯಸುತ್ತೀರಿ ಮತ್ತು ಏಕೆ ? ಮೊದಲಿಗೆ ಪ್ರಾದೇಶಿಕ ಭಾಷೆ; ನಂತರ ಪ್ರಪಂಚಜ್ಞಾನಕ್ಕಾಗಿ ಇನ್ನೊಂದು ಭಾಷೆ.

ಪ್ರಶ್ನೆ : ಪ್ರೌಢಶಾಲಾ ಶಿಕ್ಷಣ ಮತ್ತು ವಿಶ್ವವಿದ್ಯಾಲಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಯಾವ ಭಾಷೆ ?

ಉತ್ತರ : ಪ್ರಪಂಚಜ್ಞಾನದ ಸಂಪಾದನೆಗೆ ನಾನು ಆಯ್ದುಕೊಳ್ಳುವುದು ಇಂಗ್ಲಿಷನ್ನು. ಇಂಗ್ಲಿಷನ್ನು ಬಳಸಬಾರದು ಎಂದು ತೀರ್ಮಾನಿಸುವ ಮೂಲಕ ನೀವು ಈ ಪ್ರಪಂಚಕ್ಕೆ ಕಣ್ಣುಮುಚ್ಚಿಕೊಳ್ಳುತ್ತಿದ್ದೀರಿ. ಆಗಾಗ್ಗೆ ಜಪಾನಿನ ಪ್ರಸ್ತಾಪ ಬರುತ್ತದೆ. ಅಲ್ಲಿ ಎಲ್ಲವೂ ಜಪಾನೀಸ್ ಭಾಷೆಯಲ್ಲೆ ನಡೆಯುತ್ತದೆ ಎಂದು ಜನ ಹೇಳತ್ತಾರೆ. ನಿಜ ; ಆದರೆ ಅವರ ಇತಿಹಾಸವನ್ನು ಗಮನಿಸಿ. 1860ರಲ್ಲಿ ಅವರ ಸಾಕ್ಷರತೆಯ ಪ್ರಮಾಣ ಶೇಖಡಾ 60. 1860 ರಲ್ಲಿ ! ಅವರು ತಮ್ಮ ತಜ್ಞರನ್ನು ಪ್ರಪಂಚದಾದ್ಯಂತ ಕಳಿಸಿದರು. ಶ್ರೇಷ್ಠ ಕೃತಿಗಳನ್ನು ವಿಶ್ವಕೋಶ ವನ್ನು, ಅಮೂಲ್ಯ ಕೃತಿಗಳನ್ನು ಎಲ್ಲವನ್ನೂ ಜಪಾನೀಸ್ ಭಾಷೆಗೆ ತರ್ಜುಮೆ ಮಾಡಿದರು. ಈಗ ಅಲ್ಲಿಗೆ ಇಡೀ ಪ್ರಪಂಚದ ಸಂಶೋಧಕರು ಬರುತ್ತಾರೆ ಮತ್ತು ಜಪಾನೀಸ್ ಭಾಷೆಯಲ್ಲೇ ಸ್ವೋಪಜ್ಞವಾದ ತಾತ್ವಿಕ ಮತ್ತು ಆನ್ವಯಿಕ ಸಂಶೋಧನೆ ನಡೆಸುತ್ತಾರೆ. ಹೀಗಿದ್ದರೂ ಅವರು ಇಂಗ್ಲಿಷ್‌ಗೆ ಕಣ್ಣುಮುಚ್ಚಿಲ್ಲ. ಲೀಕೆ ಬರೆದ ಈ ಪುಸ್ತಕವನ್ನು ಈಗಾಗಲೆ ಯಾರಾದರೂ ಅನುವಾದಿಸಿರಬಹುದು ಅಥವಾ ಅನುವಾದಿಸುತ್ತಿರಬಹುದು. ಅವರಿಗೆ ಜಪಾನೀಸ್‌ನಲ್ಲೇ ಪ್ರಪಂಚ ಜ್ಞಾನ ಲಭ್ಯವಿದೆ. ನಮ್ಮ ಭಾರತೀಯ ಭಾಷೆಗಳಲ್ಲಿ ಕೆಲವು ಒಣಕಲು ಪಠ್ಯ ಪುಸ್ತಕಗಳನ್ನು ಬಿಟ್ಟರೆ ಏನಿದೆ ?

ಪ್ರಶ್ನೆ : ವಿಜ್ಞಾನ, ತಂತ್ರಜ್ಞಾನ ಸಂಬಂಧಿ ಪುಸ್ತಕಗಳ ವಾಚನ ಮತ್ತು ಇತರ ಬೌದ್ಧಿಕ ಕೆಲಸಗಳಿಗಾಗಿ—ಮುಖ್ಯವಾಗಿ 'ಗ್ರಂಥಾಲಯ ಭಾಷೆ'ಯಾಗಿ ಇಂಗ್ಲಿಷಿನ ಬಳಕೆಯನ್ನು ಮುಂದುವರಿಸಬೇಕೆಂದು ನೀವು ಹೇಳುತ್ತಿದ್ದೀರಲ್ಲವೆ ? ನಮ್ಮ ದೇಶದೊಳಗೆ ನಮಗೊಂದು ಸಂಪರ್ಕ ಭಾಷೆ ಬೇಕು, ಹಾಗಿದ್ದರೆ ಹಿಂದಿಯ ಕಡ್ಡಾಯ ಬೋಧನೆ ಅಥವಾ ಐಚ್ಛಿಕ ಇಂಗ್ಲಿಷ್ ಬೋಧನೆಯ ಜೊತೆ ರಾಷ್ಟ್ರೀಯ ಉದ್ದೇಶಕ್ಕಾಗಿ ಹಿಂದಿಯಂಥದೇ ಒಂದು ಭಾಷೆಯ ಬೋಧನೆಯನ್ನು ನೀವು ಶಿಫಾರಸು ಮಾಡುತ್ತೀರಾ ?

ಉತ್ತರ : ಅದು ನಿರ್ಧಾರದ ಪ್ರಶ್ನೆ. ನೀವು ಎಷ್ಟು ಭಾಷೆಗಳನ್ನು ಕಲಿಸುತ್ತೀರಿ ಎಂಬ ನಿರ್ಧಾರದ ಸಂಗತಿ. ಒಂದು ರಾಷ್ಟ್ರವಾಗಿ ನೀವು ಬೆಳೆಯಬೇಕಾದರೆ ಇಂಗ್ಲಿಷ್ ಅಗತ್ಯವಾಗಿ ಬೇಕು. ಭಾಷೆಗಳನ್ನು ಕಲಿಯಲು ಮತ್ತು ಕಲಿಸಲು ಇಡಿ ಜೀವಮಾನ ನೀವು ವಿನಿಯೋಗಿಸುತ್ತೀರಾ? ನೀವು ಇದನ್ನು ಬಯಸುವವರಾದರೆ, ತಪ್ಪು ಶಿಕ್ಷಣದಿಂದ ಇಡೀ ರಾಷ್ಟ್ರದ ಜೀವನವನ್ನು ಹಾಳುಮಾಡಬಲ್ಲಿರಿ !

ಪ್ರಶ್ನೆ : ವಯಸ್ಕ ಸಾಕ್ಷರತೆ ಬಗ್ಗೆ ಒಂದು ಪ್ರಶ್ನೆ. ನಮ್ಮಲ್ಲಿ ಸಂಪನ್ಮೂಲಗಳ ಕೊರತೆ ಇದೆ. ಪ್ರತಿಯೊಂದು ಮಗುವಿಗೂ ಶಾಲಾಜೀವನದ ಅವಕಾಶಗಳನ್ನು ಇನ್ನೂ ಕಲ್ಪಿಸಲಾಗಿಲ್ಲ. ಹೀಗಿರುವಾಗ ತಮ್ಮ ಭವಿಷ್ಯ ಹೆಚ್ಚು ಕಡಿಮೆ ನಿರ್ಧಾರ ಆಗಿರುವ ಜನರಿಗೆ ಅಕ್ಷರಗಳನ್ನು ಕಲಿಸುವುದಕ್ಕಾಗಿ ನಮ್ಮ ಶಕ್ತಿ ಮತ್ತು ಸಂಪನ್ಮೂಲಗಳನ್ನು ವ್ಯಯ ಮಾಡುವುದು ಸಮಂಜಸವೆ ? ಇದು ಆದ್ಯತೆಯ ಪ್ರಶ್ನೆ ಎಂಬುದು ನನ್ನ ಅಭಿಪ್ರಾಯ.

ಉತ್ತರ : ಯಾಕಾಗಬಾರದು ? ಪ್ರತಿಯೊಬ್ಬನಿಗೂ ಕಲಿಯುವ ಹಕ್ಕಿದೆ. ಹಾಗಿರುವಾಗ ವಯಸ್ಕರಿಗೆ ಏಕೆ ಕೂಡದು? ವಯಸ್ಕ ಸಾಕ್ಷರತೆಯ ಇಡೀ ಆಂದೋಲನ ಮುಂಬಯಿಯ ರಾತ್ರಿ ಶಾಲೆಗಳಿಂದ ಪ್ರಾರಂಭವಾದದ್ದು. ಇಲ್ಲಿಂದ ಮುಂಬೈಗೆ ದುಡಿಯಲು ಹೋದ ಅಕ್ಷರ ಬಾರದವರಿಗಾಗಿ ಪ್ರಾರಂಭವಾದವು. ರಾತ್ರಿಶಾಲೆಗಳು ನಂತರ ಇವು ಸಂಜೆ ಶಾಲೆಗಳಾಗಿ ಮಾರ್ಪಾಡಾಗಿ ಅನೇಕರು ತಮ್ಮ ಉದ್ಯೋಗಗಳನ್ನು ಬದಲಿಸಿಕೊಳ್ಳಲು ಸಾಧ್ಯವಾಯಿತು. ವಯಸ್ಕನೊಬ್ಬ ಶಿಕ್ಷಿತನಾಗಿ ಬದಲಾಗಲು ನಗರದಲ್ಲಿರುವ ಪ್ರಚೋದನೆಗಳೇ ಬೇರೆ. ಆದ್ದರಿಂದ ಯಾರಿಗೇ ಆಗಲಿ ಅಂಥ ಅವಕಾಶಗಳನ್ನು ನಿರಾಕರಿಸಬೇಕು ಎಂದು ನನಗನ್ನಿಸುವುದಿಲ್ಲ.

ಪ್ರಶ್ನೆ : ನಮ್ಮ ದೇಶದಲ್ಲಿ ಈಗ ನಡೆಸಲಾಗುತ್ತಿರುವ ವಯಸ್ಕ ಕಾರ್ಯಕ್ರಮದ ಬಗ್ಗೆ ನಿಮಗೆ ತೃಪ್ತಿ ಇದೆಯೆ ?

ಉತ್ತರ : ಇಲ್ಲ. ತಮ್ಮ ಬಿಡುವಿನ ವೇಳೆಯಲ್ಲಿ ಮೈಸೂರಿನ ಕೆಲವು ಶಿಕ್ಷಕರು ನಡೆಸಿದ ಇಂಥ ಒಂದು ಕಾರ್ಯಕ್ರಮದ ಬಗ್ಗೆ ನಿಮಗೆ ಹೇಳುತ್ತೇನೆ. ಅದು 50 ರ ಸುಮಾರಿಗೆ ಯುನೆಸ್ಕೊ ಸಂಸ್ಥೆ–ಇನ್ನೂ ನಮಗೆ ನೆರವು ಕೊಡದಿದ್ದ ಕಾಲದಲ್ಲಿ ನಡೆದದ್ದು. ಮೈಸೂರಿನ ಈ ಶಾಲೆಯ ಮೂಲಕ ಸಾಕ್ಷರತಾ ಸರ್ಟಿಫಿಕೇಟ್ ಪಡೆದ ಸುಮಾರು 250 ಜನ ಆಮೇಲೆ ಏನೂ ಓದಲಿಲ್ಲ ಎಂಬುದು ತಿಳಿಯಿತು. ಯಾಕೆ ಈ ಕೌಶಲ ಮಾಯವಾಯಿತು ? ಇವರಲ್ಲಿ ಇಬ್ಬರಿಗೆ ಈ ಮಧ್ಯದಲ್ಲಿ ಒಂದೊಂದು ಪತ್ರ ಕೈಸೇರಿ ತಮ್ಮಷ್ಟಕ್ಕೆ ಓದಲು ಸಮರ್ಥರಾಗಿದ್ದರು. ಇವರಲ್ಲಿ ಓರ್ವ ಬೇರೆಯವರಿಂದ ಉತ್ತರವನ್ನು ಬರೆಯಿಸಿದ. ಆದರೆ ಪ್ರಶ್ನೆ : ತಾವು ಗಳಿಸಿದ ಕೌಶಲವನ್ನು ಹೇಗೆ ಅವರು ಕಳೆದುಕೊಂಡರು ? ನನಗೆ ತಿಳಿದಂತೆ ಶಾಲೆ ಬಿಟ್ಟನಂತರ ಬೇಕಾಗುವ ಪೂರಕ ಸಾಮಗ್ರಿಗಳ ಬಗ್ಗೆ ನಾವು ಯೋಚಿಸಿಕೊಳ್ಳು ವುದಿಲ್ಲ. ಅವರಿಗೆ ಸರಳ ಪಠ್ಯಪುಸ್ತಕಗಳಿಲ್ಲ. ಅವರನ್ನು ಆಕರ್ಷಿಸುವ ಸಾಹಿತ್ಯ ಇಲ್ಲ. ಒಮ್ಮೆ ಪಡೆದ ಸಾಕ್ಷರತೆ ಉಳಿಯಲು ಅವರಿಗೆ ವಾಚನ ಸಾಮಗ್ರಿ ನಿರಂತರ ಲಭ್ಯವಾಗಬೇಕು. ಅವರು ಓದಲು, ಬರೆಯಲು ಅಗತ್ಯ ವಾದ ಸನ್ನಿವೇಶ ನಿರ್ಮಾಣದ ಬಗ್ಗೆ ನಾವು ತಲೆಕೆಡಿಸಿಕೊಂಡಿಲ್ಲ. ಹೀಗಾಗಿ ನಮ್ಮ ವಯಸ್ಕ ಸಾಕ್ಷರತಾ ಕಾರ್ಯಕ್ರಮಗಳು ಸಮಾಜದಲ್ಲಿ ಯಾವ ಬದಲಾವಣೆ ಯನ್ನೂ ಉಂಟುಮಾಡದಿರುವುದಕ್ಕೆ ಇದೂ ಒಂದು ಮುಖ್ಯ ಕಾರಣ. ವಯಸ್ಕ ಸಾಕ್ಷರರಿಗೆ ಅಗತ್ಯವಾದ ಫಾಲೋ ಅಪ್ ಸಾಮಗ್ರಿ ನಮ್ಮಲ್ಲಿಲ್ಲ.

ಪ್ರಶ್ನೆ : ಟಿಪ್ಪಣಿ ಮಾಡಿಕೊಳ್ಳುವುದಕ್ಕೆ, ಹೇಳುವುದಕ್ಕೆ ನೀವು ಯಾವ ಭಾಷೆಯನ್ನು ಬಳಸುತ್ತೀರಿ ?

ಉತ್ತರ : ನಾನು ಇಂಗ್ಲಿಷನ್ನು ಬಳಸುತ್ತೇನೆ. ಸಾಹಿತ್ಯಕ ಉದ್ದೇಶಗಳಿಗಾಗಿ ಕೂಡಾ. ಒಂದು ಕಥೆಯನ್ನೋ ಇನ್ನೇನನ್ನೋ ಬರೆಯುವ ಮೊದಲು ನಾನು ಗುರುತು ಹಾಕಿಕೊಳ್ಳುವ ಮುಖ್ಯಾಂಶಗಳು ಹೆಚ್ಚಾಗಿ ಇಂಗ್ಲಿಷ್‌ನಲ್ಲಿರುತ್ತವೆ.

ಪ್ರಶ್ನೆ : ಯಾಕೆ ಅಂತ ಹೇಳಬಹುದೆ ?

ಉತ್ತರ : ನನಗೆ ಗೊತ್ತಿಲ್ಲ.

ಪ್ರಶ್ನೆ : ಇಂಗ್ಲಿಷಿನ ಜ್ಞಾನ ನಿಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿದೆಯೆ ?

ಉತ್ತರ : ಇಲ್ಲ. ಅದು ನನ್ನ ಜ್ಞಾನವನ್ನು ವೃದ್ಧಿಸಿದೆ.

# ನಮ್ಮ ರಂಗಭೂಮಿ

## 'ಒಡಲಾಳ'ಕ್ಕೊಂದು ಒಡಲ ಮಿಡಿತ

ಗೆಳೆಯ ಸಿ. ಜಿ. ಕೆ.

ಮೇ ಹನ್ನೆರೆಡರ ಸಂಜೆ ಕಲಾಕ್ಷೇತ್ರದ ಕತ್ತಲಲ್ಲಿ 'ಒಡಲಾಳ'ದ ಜಗತ್ತು ನಿನ್ನ ದುರ್ಬೀನು ನಿರ್ದೇಶನದಲ್ಲಿ ತೆರೆದುಕೊಂಡ ಬಗೆ ನನ್ನ ಒಗೆ ಕದಡಿತು. ನಿಮಗೆಲ್ಲ ಅದು ಇಪ್ಪತ್ತೈದನೇ ಅನುಭವವಾದರೆ ನನಗೆ ಮೊದಲ ಅನುಭವ. ನನ್ನ ತತ್‌ಕ್ಷಣದ ಮಿಡಿತಗಳು ಇವು.

* ನಿರ್ದೇಶಕನ ಪ್ರತಿಭೆ ಪ್ರಥಮ ದರ್ಜೆಯದು ಎಂಬುದಕ್ಕೆ ಸಾಕ್ಷಿ ಸಾಕವ್ವನ ಪಾತ್ರಕ್ಕೆ ಉಮಾಶ್ರೀಯನ್ನು ಆಯ್ಕೆ ಮಾಡಿರುವುದು. ಸಾಕವ್ವನನ್ನು ಸಜೀವ ಸಾಕಾರಗೊಳಿಸಿದ ಉಮಾಶ್ರೀ ರಂಗಭೂಮಿಯ ಗಟ್ಟಿಕಾಳು. ರಂಗಸಂಪದದ ಆಶಾಕಿರಣ. ಸಾಕವ್ವಂದಿರ ಹಟ್ಟಿಗಳಲ್ಲೆ ತಪಸ್ಸು ಕೂತು ಕಲಿತಂಥ ಅಭಿನಯ. 'ಒಡಲಾಳ' ಮೊಟ್ಟಮೊದಲು ಪ್ರಕಟವಾದಾಗ ಚಿತ್ರಕಾರ ಚಂದ್ರನಾಥ ಬರೆದ ಹ್ಯಾಟುಗಾಲು, ಮೀಟುಗೈ, ಸೀಕಲು ಮೈ, ಕೋಳಿಗತ್ತುಗಳಲ್ಲಿ ಪ್ರಶ್ನಾರ್ಥ ಚಿಹ್ನೆಯಾದ ಸಾಕವ್ವನನ್ನ ಯಥಾವತ್ ಕಟೆದು ನಿಲ್ಲಸುವ ಉಮಾಶ್ರೀಯ ನಟನ ನಿಷ್ಠೆ ಎಲ್ಲರಿಗೂ ಸಾಧ್ಯವಾಗುವಂತಹುದಲ್ಲ. ಆಕೆಯ ಕಂಠಕ್ಕೆ ಅದೆಂತಹ ರೇಂಜ್ ಇದೆ. ಕರ್ಕಶವಾಗದ ತಾರಕ, ಕೇಳಿಸದೆ ಹೋಗದ ಮಂದ್ರ ಆಕೆಯ ಸ್ವರ ವಿಶೇಷ. ಹಿರೇಮಗನಿಗೆ ಪೋಲಿಸರು ಚಿತ್ರಹಿಂಸೆ ಕೊಡುವಾಗ; ಎರಡೆಕರೆ ಜಮೀನಿಗೆ ಯಾತ ಕಟ್ಟಿ ನೀರಾವರಿ ಮಾಡುವ ಕನಸು ಚಪ್ಪರಿಸುವಾಗ; ತನ್ನ ಆಸೆಗಂಟಿನಂತಹ ಹುಂಜ ತಪ್ಪಿಸಿಕೊಂಡಾಗ; ಅದನ್ನ ಕೊಂದು ತಿಂದೇಬಿಟ್ಟರೆಂದು ಸುದ್ದಿ ಸಿಕ್ಕಾಗ ಅವಳು ಆರ್ತಳಾಗುವ ರೀತಿ ಲಬಕ್ಕನೆ ಎದೆಗೆ ಕೊಕ್ಕೆ—ಹಗ್ಗ ಹಾಕಿ ಜೀಕುತ್ತದೆ.

(ನಾಟಕದ ನಂತರ ನೀನು ನನಗೆ ಉಮಾಶ್ರೀಯನ್ನು ಪರಿಚಯಿಸಿದಾಗ ಕೇವಲ ಅಚ್ಚರಿಯಲ್ಲಿ ನನ್ನ ಮಾತುಗಳು ಹೂತುಹೋಗಿದ್ದವು. ಆಕೆ ಏನೆಂದು ಕೊಂಡರೋ.)

* ಅವಿಭಕ್ತ ಕುಟುಂಬದ ಹಟ್ಟಿಯು ಒಳರಚನೆ ರಂಗದ ಮೇಲೆ ಮಾರ್ಮಿಕವಾಗಿ ಮೂಡಿಬಂತು. ಹಟ್ಟಿಯೊಳಗಿನ ಬೆಳಕು—ಹೊರಗಿನ ಕತ್ತಲು; ನಾಯಿ ಬೊಗಳಿನ ಮಧ್ಯರಾತ್ರಿ. ಹೊದ್ದುಮಲಗುವ ನಿದ್ದೆ: ಹಕ್ಕಿ ಚಿಲಿ ಪಿಲಿ ಮುಂಜಾವಲ್ಲಿ ಗೌಜೆಬ್ಬಿಸುತ್ತಾ ಹೊರಡುವ ಸಾಕವ್ವನ ದಿನಚರಿ; ಕಾಪಿಯ ಪ್ರೀತಿ; ಹಟ್ಟಿಕಟ್ಟೆ—ಬಿರಿದ ಕದಗಳು—ಚಿಂದಿಚಪ್ಪ ಎಲ್ಲ ಎಲ್ಲ ದೇವನೂರರ ಭಾವಪ್ರಪಂಚಕ್ಕೆ ನೀನು ಪಾತಾಳಗರಡಿ ಹಾಕಲು ಹವಣಿಸಿದ್ದನ್ನ ಸಾಬೀತು ಗೊಳಿಸುತ್ತವೆ.

* ದೇವನೂರರ ಕೃತಿಗೆ ಮತ್ತೊಂದು ಆಯಾಮ ಕೊಡಲೋ ಎಂಬಂತೆ ದ. ಕ. ಬ್ರಾಹ್ಮಣನ ಹೋಟೆಲು ರಂಗದ ಮೇಲೆ ಬಂದಂತಿದೆ. ಪುಸ್ತಕ ಧಾಟಿಯ ಬಡಬಡಿಕೆ ನಡುವೆ ಈ ಭಟ್ಟ ಊರಿನ ಮೇಲ್ಜಾತಿ ಹಾಗೂ ಕೆಳಜಾತಿ ಕೇರಿಗಳ ಕಡೆ ಕೈ ತೋರಿಸಿ 'ಎಲ್ಲರೂ ಬಡವರೆ' ಎಂಬರ್ಥದ ಮಾತಾಡುತ್ತಾನೆ. ಇದು 'ಒಡಲಾಳ'ದ ಜಗತ್ತಿಗೆ ಹೊರಗಾಗುವ ಮಾತು. ಸಾಕವ್ವನ ಮೂಕ ಪ್ರಪಂಚದ ನೋವನ್ನ ತಿಳಿಗೊಳಿಸಿಬಿಡುವಂತೆ ವ್ಯಾಖ್ಯಾನ. ಇಂತಹ ಯಾವ ಹಿಂಟೂ ಅಲ್ಲಿ ಬೇಡವಾಗಿತ್ತು.

* ನಾಟಕದ ಪೂರ್ವಾರ್ಧವಿಡೀ ತಮಾಷೆಯಾಗಿ ಪ್ರೇಕ್ಷಕರನ್ನು ತೊಡಗಿಸಿಕೊಳ್ಳುತ್ತ ಮೂರು ಮಾತಿಗೆ ಬೈಗುಳ ವ್ಯಂಗ್ಯಗಳಿಂದ ನಗು ಕಡೆಯುತ್ತಾ ಸಾಗುತ್ತದೆ. ಈ ಉದ್ದೇಶಕ್ಕೆಂದೇ ಧಾರಾಳಕ್ಕೂ ಹೆಚ್ಚಿನಿಸುವಷ್ಟು 'ಮುಕುಳಿ ಕೊಯ್ದು ಉಪ್ಪುಕಾರ ತುಂಬಿದ್ರು' 'ತಿರ್ಕೊಂಡು ತಿನ್ನೋರನ್ನ ಹಿಡಕೊಂಡು ಕೇದರು' ಇಂತಹಮಾತು ಗಳ ಸುರಿಮಳೆಯಾದಂತಿದೆ. ದೇವನೂರರ ಕಥೆಯಲ್ಲಿ ಇಂತಹ ಅಬ್ಬರದ ಹಾಸ್ಯ ನಕಲಿಗಳಿಲ್ಲ. ಅಲ್ಲಿನ ತಿಳಿಹಾಸ್ಯ ಬರಿ ಲೇಪನ ಮಾತ್ರ. ಬಿಡಿಸಿ ನೋಡಿದರೆ ಅದರೊಳಗೆ ವಿಷಾದ, ಸಂಕಟ, ಆರ್ತತೆ ಅಡಗಿದೆ, ನಿನ್ನ ಪ್ರದರ್ಶನ ಈ ಅಂಶವನ್ನು ಕೊಂಚ ಮಟ್ಟಿಗೆ ಕಡೆಗಣಿಸಿಬಿಟ್ಟಿದೆ.

* ಇದಕ್ಕೆ ತದ್ವಿರುದ್ಧವಾಗಿ ನಾಟಕ ಕಲಿಸುವ ದೃಶ್ಯ ಶುದ್ಧಹಾಸ್ಯ ಹುಟ್ಟಿಹಾಕುತ್ತದೆ. ಸಾಕವ್ವನ ದಾಳಿಗೆ ಸಿಕ್ಕುತತ್ತರಿಸುವ ನಾಟಕದ ಪರಾಕ್ರಮಿಗಳ ವ್ಯಂಗವೂ ಕಚಗುಳಿ ಇಡುವಂತಿದೆ.

* ಇಷ್ಟೆಲ್ಲದರ ನಡುವೆ ಸ್ವಂತತ್ರ ಭಾರತದ ಬಾವುಟ ಹೊದ್ದ ದುಪ್ಪ ಕಮಿಶನರ್ ಮಾತ್ರ ಪ್ರೇಕ್ಷಕರನ್ನ ಮಾನವೀಯ ಸ್ಪಂದನಕ್ಕೆ ಎಳೆಯುವಂತೆ ರೂಪುಗೊಂಡಿದ್ದಾನೆ.

* ಉತ್ತರಾರ್ಧ ಹೆಚ್ಚು ಹುರಿಗೊಂಡಿದೆ. ಕಡಲೆಕಾಯಿ ಕದ್ದ ಗುಮಾನಿ ಮೇಲೆ ಪೋಲಿಸರು ನುಗ್ಗಿ ಹಟ್ಟಿ ಇಡಿ ಜಪ್ತಿ ಮಾಡುವ ದೃಶ್ಯದ ಸಂಯೋಜನೆ ಅಸಾಧಾರಣವಾದ್ದು: ಪೋಲಿಸರು ತುರ್ತು ಕ್ರೌರ್ಯ + ಸಾಕವ್ವನ ಸಂಸಾರದ ನಿರ್ವಿಣ್ಣ ಪರಿಸ್ಥಿತಿ + ಚಲ್ಲಾಪಿಲಿ ಭೀತಿಯಲ್ಲಿ ಮೌನವಾಗಿ ಊಳಿಡುವ ಹಟ್ಟಿ ಬಾಗಿಲುಗಳು ಇವು ಒಂದು ಭಾವ ತ್ರಿಕೋನವನ್ನು ಮೀಟಿ ಅಗಾಧ ವಿಷಾದ ವನ್ನು ಮೂಡಿಸುತ್ತವೆ. ತುಂಬಾ ವರ್ಷಗಳಿಂದ ಅತ್ತೆ ಇರದ ನಾನು ಈ ದೃಶ್ಯದಲ್ಲಿ ಬಿಕ್ಕಿ ತಡೆಯದಾದೆ.

ಇವೇನು ಬೆಳಕು, ತಂತ್ರ, ಚಲನ ಇತ್ಯಾದಿಗಳನ್ನು ಜ್ಯಾಮಿತಿಯಂತೆ ವ್ಯಾಖ್ಯಾನಿ ಸುವ ವಿಮರ್ಶೆಯ ಜಾಳುಗಳಲ್ಲ. ಗೆಳೆಯನೊಬ್ಬನ ಸರಳ ನೇರತುಡಿತಗಳು. ಶೈಲೀ ಕೃತಗೊಂಡ ಹೊಲತಿ ಸಾಕವ್ವನ ವಾಗ್ವೈಖರಿಯ ಜಾಡುಹಿಡಿಯಲು ಕಷ್ಟವಾದರೂ ಅದರ ಸತ್ವದ ಬಗ್ಗೆ ನಂಬಿಕೆಯುಳ್ಳ ಹಳ್ಳಿಗನೊಬ್ಬನ ಮಾತುಗಳು.

ನಿನಗೆ ಬರೆಯಲು, ನಿನ್ನೊಡನೆ ಮಾತಾಡಲು ಹೆಡತಿ-ಭಿಡತಿ ಆಗುವುದಿಲ್ಲ ನನಗೆ. ಎಂಭತ್ತರ ಸಮುದಾಯದ ಜಾತಾದಲ್ಲಿ ಗಟ್ಟಿಗೊಂಡ ಸ್ನೇಹದ ಪರಿಣಾಮ ಇದು. ಶಿವಮೊಗ್ಗ ಜಿಲ್ಲೆಯ ಸೌಳಂಗದ ನಡುಬಯಲಲ್ಲಿ ಬಿಸಿಲನ್ನೆ ಡೇರೆ ಮಾಡಿ ಜನ ಸಮುದಾಯದ ಎದೆಗೆ ಡಂಗುರ ಹೊಡೆದು 'ಪತ್ರೆ ಸಂಗಪ್ಪನ ಕಗ್ಗೊಲೆ' ಆಡಿದ್ದು ಮರೆಯಲಾರದ ಚಿತ್ರ. 'ಪತ್ರೆ ಸಂಗಪ್ಪನ' ಸಂಯೋಜನೆಯಲ್ಲಿ ನಾನು ಮನಗಾಡಿದ್ದೆ ಒಬ್ಬ ರಂಗದ್ರಷ್ಟಾರನಾಗುವ ಹಿಮ್ಮತ್ತು ನಿನ್ನಲ್ಲಿದೆಯೆಂದು. ಅದನ್ನು 'ಒಡಲಾಳ' ಆಗು ಮಾಡಿತೋರಿಸಿದೆ. ರಂಗನಿರ್ದೇಶಕನಾಗಿ—ಸಂಘಟಕನಾಗಿ— ಹುಡುಕಾಟಕ್ಕೆ ಬಿದ್ದ ವ್ಯಕ್ತಿಯಾಗಿ—ಕೇವಲ ಮನುಷ್ಯನಾಗಿ ನೀನು ಬೆಳೆಯುವುದನ್ನ ಮೂಲೆ ಯೊಂದರಲ್ಲಿ ನಿಂತು ನಿರೀಕ್ಷಿಸುವವರಲ್ಲಿ ನಾನೂ ಒಬ್ಬ.

ನಿನ್ನ 'ಒಡಲಾಳ' ಇನ್ನಷ್ಟು ಹುರಿಗೊಳ್ಳಬೇಕು. ಅದರಲ್ಲಿನ ಜಗತ್ತಿನ ನಿರ್ಮಾಣಕ್ಕೆ ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಕಾರಣರಾದವರನ್ನೂ ತಟ್ಟಿ ಅಂಥವರಲ್ಲಿ guilt ಹುಟ್ಟಿಹಾಕುವಷ್ಟು, ಅವರ ಕೋಟೆಗೆ ಕನ್ನ ಹಾಕುವಷ್ಟು ಶಕ್ತಿಯುತವಾಗಬೇಕು. 'ಒಡಳಲಾಳವನ್ನು ಸಿನಿಮಾ ಮಾಡುತ್ತಿರುವಂತೆ, ಅದರ ಬಗ್ಗೆ ತುಂಬಾ ನಿರೀಕ್ಷೆಇಟ್ಟು ಕೊಂಡಿದ್ದೇನೆ.

—ಬಿದರಹಳ್ಳಿ ನರಸಿಂಹ ಮೂರ್ತಿ
ಶಿವಮೊಗ್ಗ

## 'ಮೀಡಿಯಾ'

'ಮೀಡಿಯಾ' ಆಧುನಿಕ ನಾಟಕಕಾರರಿಗೂ ಪ್ರಯೋಗಿಗಳಿಗೂ ಸವಾಲಾಗಿ ನಿಂತಿರುವ ಒಂದು ನಾಟಕ. ರಂಗಭೂಮಿಯಲ್ಲಿ ಘರ್ಷಣೆಗೆ ಎದುರುಬದರಾಗುವ

ಪಾತ್ರಗಳಲ್ಲಿ ಮಾನವನ ಹೆಮ್ಮೆಗಳನ್ನೆಲ್ಲಾ ಪರೀಕ್ಷೆಗೆ ಒಳಪಡಿಸುವ ರೀತಿ ನೀತಿಯೇ ಆಗಿದ್ದರೂ 'ವಾಸ್ತವಿಕ'ವಾಗಿ ಯಾವುದೇ ನಾಗರಿಕ ಸೂಕ್ಷ್ಮತೆಯನ್ನು ಬೇರುಸಹಿತ ಅಳ್ಳಾಡಿಸಬಲ್ಲ ಶಕ್ತಿ ಇದಕ್ಕೆ ಇದೆ. ಆದುದರಿಂದ ಪ್ರಪಂಚದ ರಂಗಭೂಮಿಯು ಈಡಿಪಸ್ ನಾಟಕದಂತೆ ಇದೂ ಉಳಿದುಬಂದಿದೆ. ಒಂದು ರೀತಿಯಲ್ಲಿ ಈಡಿಪಸ್ ನಾಟಕವು ಒಂದು 'ಫಾರ್ಮುಲಾಪ್ಲೇ' ಆಗಬಹುದು ಆದರೆ 'ಮೀಡಿಯಾ' ಹಾಗಾಗದೆ ಉಳಿಯುತ್ತದೆ. ಏಕೆಂದರೆ 'ಮೀಡಿಯಾ' ಪಾತ್ರವು ಗಂಡಸು ರೂಪಿಸಿಕೊಂಡ ಬದುಕಿನಲ್ಲಿ ತನ್ನ ನೆಲೆ ಬೆಲೆಗಳನ್ನು ಸವಾಲಿಸುವ ಹೆಣ್ಣಿನ ಸಂಕೇತವಾಗುತ್ತದೆ.

ಮೀಡಿಯಾ ನೆರವಿನಿಂದ ಬದುಕಿಕೊಂಡ ಜೇಸನ್ ತನ್ನ ಕೃತಜ್ಞತೆಯಲ್ಲಿ ಆಕೆಯನ್ನು ಪ್ರೀತಿಸಿ ಮಕ್ಕಳನ್ನೂ ಪಡೆದೂ ಮತ್ತೆ ಡೊಂಕುಬಾಲದಂತೆ ಮತ್ತೊಂದು ಹೆಣ್ಣನ್ನು ಅಪ್ಪಿಕೊಳ್ಳುವ ನಡತೆಯಿಂದಾಗಿ ಪ್ರತಿನಾಯಕನಾಗುತ್ತಾನೆ. ಯೂರಿಪಿಡೀಸನ ಇಂಥ ಚಿಂತನದಿಂದ ಬದುಕಿನ ಒಳಕೋಟೆಯು ಹಳೆಯ ಗ್ರೀಕ್ ಸಿದ್ಧಾಂತವನ್ನೂ ಮೀರಿ ನಿಲ್ಲುತ್ತದೆ. ಇಂಥ ನಾಟಕವನ್ನು ಈಗ ಪ್ರದರ್ಶಿಸಬೇಕಾದಲ್ಲಿ ಇದರ ಆಧುನಿಕ (Interpretation) ಅರ್ಥ ವಿವರವನ್ನೇ ಸಾಧಿಸಬೇಕಾಗುತ್ತದೆ. ಕೇವಲ ಗ್ರೀಕ್ ಸಂಸ್ಕೃತಿಯ ಪರಿಚಯಕ್ಕಾಗಿ ಈ ನಾಟಕವನ್ನು ಇಂದು ಯಾರೂ ನೋಡಲಾರರು. ಪಂಡಿತರಲ್ಲದ ಸಾಮಾನ್ಯರಿಗಂತೂ ಸಮಕಾಲಿಕ ಅರ್ಥವೇ ಮುಖ್ಯವಾಗುತ್ತದೆ, ಇಲ್ಲದಿದ್ದರೆ ಆತ/ಆಕೆ ಯಾರಾದರೂ ಈ ನಾಟಕದ ಪ್ರೇಕ್ಷಕರಾಗಲು ಕಾಲ ವ್ಯರ್ಥ ಮಾಡಲಾರರು.

ಶ್ರೀಮತಿ ಮಾಲತಿಯವರ ನಿರ್ದೇಶನದಲ್ಲಿ 'ಮೀಡಿಯಾ'ವು ಜೂನ್ ತಿಂಗಳು 5 ಮತ್ತು 6ನೇ ತಾರೀಖುಗಳಲ್ಲಿ ಜರುಗಿದಾಗ ಸಾಕಷ್ಟು ಪ್ರಚಾರವಾಗಲಿಲ್ಲವೆಂದರೂ ಈ ಪ್ರದರ್ಶನ ಕುತೂಹಲ ಕಾರಿಯಾಗಿದ್ದಿತು.

ಪ್ರದರ್ಶನದ ಸೆಟ್ಟಿಂಗ್ ಸರಳವಾಗಿದ್ದು ನಾಯಕಿಯಾಗಿ (ಅಂದರೆ ಮೀಡಿಯಾ) ಶ್ರೀಮತಿ ಜಯಶ್ರೀ ನೀಡಿದ ಅಬಿನಯವು ಪ್ರಾಮಾಣಿಕವಾಗಿಯೂ ಕೆಲವೆಡೆ ಮಿಂಚಿನಂತೆ ಹೊಳೆದುದೂ ಆಗಿದ್ದಿತು. ಪ್ರತಿ ನಾಯಕ ಜೇಸನ್ ದನಿಯೇ ಕೈಕೊಟ್ಟಂತೆ ಕಾಣುತ್ತಿತ್ತು. ಪ್ರದರ್ಶನದಲ್ಲಿ ಅಥೆನ್ಸಿನ ರಾಜ ಮತ್ತು ದೂತರು ಬಂದು ಮೀಡಿಯಾಳೊಡನೆ ತೋರುವ ವರ್ತನೆಯಲ್ಲಿ ಜೀವಂತತನವಿತ್ತು. ಸ್ವತಹ ಮೀಡಿಯಾ ಪಾತ್ರದಲ್ಲಿ ಜಯಶ್ರೀ ಸುಂದರವಾಗಿ ಕಂಡರೂ ಮೊದಲಿಂದ ಕೊನೆತನಕ ಒಡಮೂಡಿದ ಒಂದು ವ್ಯಕ್ತಿತ್ವವಾಗಲಿಲ್ಲ. ಆಕೆ ಮೌನವಾಗಿ (ಕಲ್ಲಾಗಿ) ನಿಂತಾಗಲೆಲ್ಲಾ ಬೇರೆಯ ಪಾತ್ರಗಳೇ ಮನಸೆಳೆಯುವಂತಾಗುತ್ತಿದ್ದುದಲ್ಲದೆ ಸ್ತ್ರೀಯರ ಮೇಳವು ನ್ಯಾಯವಾದ ಪರಿಣಾಮ ಬೀರಲಾರದೇ ಉಳಿಯಿತು. ಅಂದರೆ ಮೀಡಿಯಾ ಪಾತ್ರದ ಥಿಯೇ

ಟ್ರೆಕಾಲಿಟಿಯು ದುರ್ಬಲವಾಯಿತೆನ್ನಬೇಕಾಗಿದೆ. ಆದರೂ ಕೆಲವೆಡೆ ಅದರಲ್ಲೂ ಜೇಸನನೊಡನೆ ಕೊನೆಯ ಬಾರಿಗೆ ಸವಾಲು ಬಿದ್ದಾಗ 'ಮೀಡಿಯಾ' ಆಗಿ ಜಯಶ್ರೀ ಪ್ರೇಕ್ಷಕರನ್ನು ಸೆಳೆದಂತೆ ಕಂಡುಬಿತು.

ನಾಟಕದ ಪ್ರದರ್ಶನದ ದೌರ್ಬಲ್ಯಗಳಲ್ಲಿ ಮೆಟ್ಟಿಲುಗಳಿಂದ ಕೂಡಿದ ಸೆಟ್ಸ್ ಕುಳಿತುಕೊಳ್ಳಲು ಮತ್ತು ಮೇಲೇರಲು ಅನುಕೂಲವಾಗಿದ್ದಂತೆ ಕಂಡರೂ ಮೀಡಿಯಾಳ ಪಾತ್ರಕ್ಕೆ ಅಷ್ಟೊಂದು ಪ್ರಯೋಜನಕಾರಿಯಾಗಿರಲಿಲ್ಲ. ಎರಡು ಕಂಬಗಳು ಮಾತ್ರ ಉಚಿತವಾದ ರೀತಿಯಲ್ಲಿ ದೃಷ್ಟಿಯ ಸೀಮಿತವಾಗಿದ್ದುವು. ನಿಜಕ್ಕೂ ಮೆಟ್ಟಿಲುಗಳು ದಾಸಿಗೆ ಮತ್ತು ಮಕ್ಕಳ ಮಾಸ್ತರಿಗೂ ಅನುಕೂಲವಾಗಿದ್ದವು. ಸೈಕ್ಲೊರಾಮಾ ಬಳಸಿದ್ದರಿಂದ ರಂಗಕ್ಕೆ ಕಳೆಕಟ್ಟಿದ್ದಲ್ಲದೇ ರಥವನ್ನು ಬಳಸಲು ಅನುಕೂಲವಾಗಿದ್ದಿತು. ರಥದ ಮೇಲೆ ನಿಂತ ಮೀಡಿಯಾ ಮತ್ತು ಅವಳ ಬಳಿ ಬಿದ್ದಿದ್ದ ಮಕ್ಕಳ ದೇಹಗಳು (!) ನಾಟಕದ ಅತ್ಯುತ್ತಮ ಸಂದರ್ಭವನ್ನು ನೆನಪಿನಲ್ಲಿ ಉಳಿಸಲು ಸಮರ್ಥವಾಯಿತು.

ಮೇಳವು ದುರ್ಬಲವಾಗಿದ್ದುದಲ್ಲದೆ 'ಮೀಡಿಯಾ' ಪಾತ್ರದ ಸ್ಪಷ್ಟತೆಗೆ ಅಡ್ಡಿಯಾಯಿತು–ಎನ್ನಬಹುದು. ಅಸ್ಪಷ್ಟವಾದ ನಿಲುವಿನ ಮೇಳವು ಹೀಗೆ ಮುಖ್ಯ ಪಾತ್ರಕ್ಕೆ ಅಡ್ಡಿಯಾಗಬಾರದಿತ್ತು ಎನ್ನಿಸುತ್ತದೆ. ಇಂತಹ ದೌರ್ಬಲ್ಯಕ್ಕೆ ಆಧುನಿಕ ಪ್ರೊಸೀನಿಯಂ ಸ್ಟೇಜ್ ಕೂಡಕಾರಣವಾಗಿರಬಹುದು. ಆದರೆ ಕೇವಲ ದನಿಗಳಂತೆ ಮಾಡುವ ಮೇಳವನ್ನು ಇನ್ನೂ ಹೆಚ್ಚು ಎಚ್ಚರಿಕೆಯಿಂದ ಬಳಸಲು ಸಾಧ್ಯವಿದ್ದಿತು. ನಿಜಕ್ಕೂ ನಾಟಕವು ಪ್ರಾರಂಭವಾದಾಗ ಕಾಣುವ ಮೇಳವು ತುಂಬ ಸಮರ್ಥವಾಗಿತ್ತು. ಆದರೆ ಮುಂದಿನ ದೃಶ್ಯಗಳಲ್ಲಿ ಅವಕ್ಕೆ ರೂಪವಿಲ್ಲದಂತೆ ಆದುದರಿಂದ ಪ್ರೇಕ್ಷಕರಿಗೆ ನಿರಾಶೆಯುಂತೂ ಸ್ಪಷ್ಟವಾಗಿತ್ತು.

ನಾಟಕದ ಆಧುನಿಕ ಅನುವಾದದಲ್ಲಿ ಸರಳತೆಯಿದ್ದರೂ ನಿರ್ದೇಶಕರು ಸರಳರಗಳೆಯನ್ನು ಬಳಸಿದಂತೆ ಅನೇಕ ಕಡೆಗಳಲ್ಲಿ ಅದರಲ್ಲೂ ಸ್ವಗತಗಳಲ್ಲಿ ಅನ್ನಿಸುತ್ತಿತ್ತು. ಭಾಷೆಯನ್ನು ಮೃದುಗೊಳಿಸುವ ಪ್ರಯತ್ನವಾಯಿತೆಂದು ಅನ್ನಿಸುತ್ತಿದ್ದ ಕಾರಣ ಭಾವಗಳೂ ಹರಿತವಾಗಿ ಮೂಡಲಾಗಲಿಲ್ಲ. ಆದುದರಿಂದ ಬಹುಶಃ ನಮ್ಮ ಆಧುನಿಕ ಅನುವಾದಗಳಲ್ಲಿ ಗದ್ಯಾನುವಾದಕ್ಕಿಂತ 'ಮಾತಿನ ಕಡೆಗೆ ತಿರುಗಿದ ಅನುವಾದಗಳು' ಅವಶ್ಯವಾಗಬಹುದು. ಇದರ ತಥ್ವವನ್ನು ಯಾರೇ ಆಗಲಿ ಅನುವಾದಕರೂ ನಿರ್ದೇಶಕರೂ ಕೂಡಿ ಪ್ರಯೋಗಿಸಿ ಕಂಡುಕೊಳ್ಳುವುದು ಒಳ್ಳೆಯದು. ಈಗಿರುವಂತೆ ಕನ್ನಡ ಗದ್ಯಾನುವಾದಗಳು ಭಾವನೆಗಳನ್ನು ಮೊಟಕು ಮಾಡುತ್ತವೆ. ನಾಟಕದಲ್ಲಿ ಸಾರ್ವಕಾಲಿಕವಾಗಿ 'ಮಾತುಗಳ ಘರ್ಷಣೆಯೇ' ಮುಖ್ಯವಾಗಿರುತ್ತದೆ. ಇದರಲ್ಲಿ ಕೊರತೆಯಾದಾಗ ಪ್ರೇಕ್ಷಕನಿಗಂತೂ ನಿರಸುಮುರಸಾಗುತ್ತದೆ.

ಒಟ್ಟಿನಲ್ಲಿ ಶ್ರೀಮತಿ ಮಾಲತಿಯವರ 'ಮೀಡಿಯಾ' ಮುಂದಿನ ಪ್ರಯೋಗಗಳಲ್ಲಿ ಸಾಕಷ್ಟು ತಿದ್ದಿಕೊಂಡು ಆಕರ್ಷಣೀಯವಾಗಬಹುದೆಂದು ಹಾರೈಸುತ್ತೇನೆ.

**—ಕೆ. ನೆಂ. ರಾಜಗೋಪಾಲ**

# ಕಲಾಗಂಗೋತ್ರಿ

"ಅಸಾಧ್ಯವಾದುದನ್ನು ಸಾಧ್ಯವಾಗಿಸುವ ಮುಗಿಲ ಹಂಬಲವನ್ನು ಮೈತಾಳಿಸಿಕೊಂಡು ನೆಲದಲ್ಲಿನ ಮಾನವ ಕಾಲಿಗುಲನ ಕಾಲನಡೆಯ ಉಡಿಯಲ್ಲಿಯೇ ಸಾಗುತ್ತಾ ಪ್ರೀತಿ ತಿರಸ್ಕಾರಗಳ ಕಡೆಗೆ ತುಯ್ಯುತ್ತಾ, ರಂಗಭೂಮಿಯನ್ನು ಸಹ್ಯವಾಗಿರಿಸಿಕೊಂಡು, ಸ್ನೇಹ ಸೇತುವೆ ಮಾಡಿಕೊಂಡು ಖುಷಿಪಡಲು ಖುಷಿಕೊಡಲು ಪ್ರಯತ್ನಿಸುವ ಮಿತ್ರರ ತಂಡ ಕಲಾಗಂಗೋತ್ರಿ".

'ಕಲಾಗಂಗೋತ್ರಿ' ನಮ್ಮ ರಂಗಭೂಮಿಯ ಮುಖ್ಯ ತಂಡಗಳಲ್ಲಿ ಒಂದು. ಅದು ತನ್ನ ಹತ್ತನೆಯ ವರ್ಷದ ಹುಟ್ಟು ಹಬ್ಬವನ್ನು ಇತ್ತೀಚೆಗೆ ಆಚರಿಸಿತು, ಆ ಸಂದರ್ಭದಲ್ಲಿ ಹೊರತಂದ ಕರಪತ್ರದಿಂದ ಮೇಲಿನ ವಾಕ್ಯಗಳನ್ನು ಉದ್ಧರಿಸಿದೆ.

ನಮ್ಮ ರಂಗಭೂಮಿಯ ವಿಚಿತ್ರ ರಾಜಕೀಯದ ನಡುವೆ ಏನು ನಡೆಯುತ್ತಿದೆ, ಏನು ನಡೆಯುತ್ತಿಲ್ಲ ಎಂಬುದನ್ನೂ ಹೇಳುವುದೇ ಕಷ್ಟವಾಗುತ್ತಿದೆ. ಈ ರಾಜಕೀಯ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರಕ್ಕೆ ಸೀಮಿತವಿರಬಹುದು. ಯಾಕೆಂದರೆ ಹೊರಗಡೆ ಇದ್ಯಾವ ತರಲೆಗೆ ಸಿಕ್ಕದೆ ಕೆಲಸಮಾಡಿಕೊಂಡು ಹೋಗುವ ರಂಗ ಚಟುವಟಿಕೆ ಇದೆ. ರಾಜಕೀಯಕ್ಕೆ ಇದೊಂದು ಮಿನಿ ವಿಧಾನ ಸೌಧವಾಗಿದೆ. ಆದ್ದರಿಂದಲೇ ಪ್ರತಿಯೊಂದಕ್ಕೂ ಮಂತ್ರಿಗಳನ್ನು ಕರೆಸ್ತಾರೆ. ಒಂದು ಅರ್ಥದಲ್ಲಿ ಇದು ರೋಗವಾಗಿ ಪರಿಣಮಿಸಿದೆ.

ಇಂಥ ವಾತಾವರಣದಲ್ಲಿ 'ಕಲಾಗಂಗೋತ್ರಿ'ಯವರು ತಮ್ಮ ಹತ್ತನೆ ವರ್ಷದ ಹುಟ್ಟುಹಬ್ಬವನ್ನು ಆಚರಿಸಿದ್ದು ಸ್ವಾಗತಾರ್ಹ. ಆದರೆ ಈ ಸಂದರ್ಭದಲ್ಲಿ ನಡೆಸಿದ ನಾಟಕೋತ್ಸವದಲ್ಲಿ ತಮ್ಮ ತಂಡದ ಪ್ರಯೋಗಗಳನ್ನೇ ತೆಗೆದುಕೊಂಡಿದ್ದರೆ ಚೆನ್ನಾಗಿತ್ತು. ಹಣ ಬರುವುದಿಲ್ಲವೆಂದು ಅಧೈರ್ಯದಿಂದಲೇನೋ ಮಾಸ್ಟರ್ ಹಿರಣ್ಣಯ್ಯನ ನಾಟಕವನ್ನು ಪ್ರದರ್ಶಿಸಿದರು. ಇದರಿಂದ ದುಡ್ಡು ಬಂದಿರಬಹುದು. ಆದರೆ ಯಾವ ಸಾರ್ಥಕತೆಗಾಗಿ ?

ಇದೇ ತಂಡದ 'ಮುಖ್ಯಮಂತ್ರಿ' ನೂರನೆಯ ಪ್ರದರ್ಶನವನ್ನು ಕಂಡಿತು. ಆದರ ಮುಖ್ಯಮಂತ್ರಿ (ಚಂದ್ರು) ಈಗ ಮುಖ್ಯ ಮಂತ್ರಿಯೇ ಆಗಿ ಬೆಳ್ಳಿಯ ತೆರೆಗೆ

ಜಾರಿಕೊಂಡಿದ್ದಾರೆ. ಆದ್ದರಿಂದ ಈಗಾಗಲೇ ಚಲನಚಿತ್ರ ನಟರಿಗೆ ಬರಬಹುದಾದ ಕೃತಕ ನಾಟಕೀಯತೆ ಬರದಿರಲಿ. ಇದೆಲ್ಲ ಚಂದ್ರುವಿನ ವೈಯಕ್ತಿಕ ವಿಷಯವಾದರೂ; ಕಲಾಗಂಗೋತ್ರಿಗೆ ಪೆಟ್ಟಂತೂ ನಿಜ. ಕಳೆದೆರಡು ವರ್ಷಗಳಿಂದ ಕಲಾಗಂಗೋತ್ರಿ ಮೊದಲಿನ ಉತ್ಸಾಹವನ್ನು ಉಳಿಸಿಕೊಂಡಿಲ್ಲ. ಈ ತಂಡದ ಲವಲವಿಕೆಯ ವ್ಯಕ್ತಿಗಳಾದ ಮುಖ್ಯಮಂತ್ರಿ ಚಂದ್ರು, ರಾಜಾರಾಮ್. ಕೃಷ್ಣೇಗೌಡ, ನಂಜುಂಡಯ್ಯ, ಶ್ರೀನಿವಾಸ್, ಅಶೋಕ್, ಭಾರ್ಗವಿ ನಾರಾಯಣ್ ಮುಂತಾದವರೆಲ್ಲ ಸಪ್ಪೆಯಾಗಿ ಕಾಣತೊಡಗಿದ್ದಾರೆ. ಇವರೆಲ್ಲ ಉತ್ತಮ ನಟರಾಗಿರುವುದರಿಂದ ಮತ್ತೆ ತಮ್ಮ ಸುತ್ತ ತುಂಬಿಕೊಂಡಿರುವ ಗಬ್ಬು ರಾಜಕೀಯದ ನಡುವೆಯೂ ತಮ್ಮ ತಂಡವನ್ನು ಜೀವಂತವಾಗಿಡಲು ಪ್ರಯತ್ನಿಸಬೇಕು,

'ಕಲಾಗಂಗೋತ್ರಿ ನಡೆಸಿದ ಉತ್ಸವದ ಮತ್ತೊಂದು ಅರ್ಥಪೂರ್ಣ ಕಾರ್ಯಕ್ರಮವೆಂದರೆ ; ರಂಗ ಪರಿಕರಗಳ ಪ್ರದರ್ಶನ. ತಮ್ಮೆಲ್ಲ ಪ್ರಯೋಗಗಳ ಪರಿಕರಗಳನ್ನು ಜೋಪಾನವಾಗಿ ಕಾಯ್ದುಕೊಂಡು ಬಂದು ಪ್ರದರ್ಶಿಸಿದ್ದು ಹೆಚ್ಚು ಮಹತ್ವಪೂರ್ಣವಾಗಿತ್ತು. ವಿವಿಧ ಸಂದರ್ಭಗಳಲ್ಲಿ ಕಲಾವಿದರು ಬಳಸಿದ ಜೋಡುಗಳು ವೈಭವದ ಉಡುಪುಗಳು ಹತ್ತುವರ್ಷ ಬದುಕಿದ ತಮ್ಮ ಚರಿತ್ರೆಯನ್ನು ಹೇಳುತ್ತಿದ್ದುವು ಇದರ ನಡುವೆ ಕಲಾಗಂಗೋತ್ರಿಯ ಮಾರ್ಗದರ್ಶಕರಾದ ಪ್ರೊ. ಬಿ.ಸಿ. ಯವರು ತಮ್ಮ ಅರವತ್ತೈದರ ಗಡಿಯನ್ನು ಮರೆತು ಹುಡುಗರ ನಡುವೆ ಸದಾ ಹುಡುಗರಾಗಿ ಓಡಾಡುವ ವಾತಾವರಣವೂ ಸಂತೋಷದ ವಿಷಯವೇ. ಯಾಕೆಂದರೆ ಏನೂ ರಾಜಕೀಯ ಮಾಡದೆ ಅಕಾಡೆಮಿ ಸದಸ್ಯತ್ವಕ್ಕೆ ಪರದಾಡದೆ ಜೀವಂತವಾಗಿರುವುದೇ ; ನಾವು ಸದಾ ನೆನಪು ಮಾಡಿಕೊಳ್ಳಬೇಕಾದ ಸಂಗತಿ.

—ಸಿದ್ಧಾರ್ಥ

ದೇಶದಲ್ಲಿ ಸುಭಿಕ್ಷವಿರುವಾಗ ಬಡವನಾಗಿರುವುದು ನಾಚಿಕೆ
ದೇಶಕ್ಕೆ ಕಷ್ಟ ಇರುವಾಗ ಶ್ರೀಮಂತನಾಗಿರುವುದು ನಾಚಿಕೆ

—ಕನ್‌ಫ್ಯೂಷಿಯಸ್

## ಸಾದರ ಸ್ವೀಕಾರ

**ಜೀವ-ಸಾವುಗಳ ನಡುವೆ** (ಕವನ ಸಂಕಲನ)
—ಶಶಿಕಲಾವಸ್ತ್ರದ, ಚೈತನ್ಯ ಪ್ರಕಾಶನ, ಸಿಂದಗಿ, ವಿಜಾಪುರಜಿಲ್ಲೆ
ಬೆಲೆ : 5 ರೂ.

**ಆಸ್ತಿ** (ಕಾದಂಬರಿ)
ಕುಂ. ವೀರಭದ್ರಪ್ಪ, ತೊಟ್ಟಿಲು ಮರದ ಬಳಿ, ಕೊಟ್ಟೂರು,
ಬಳ್ಳಾರಿಜಿಲ್ಲೆ ಬೆಲೆ ; 14 ರೂ.

**ಭದ್ರೇರು ಹಸೆಯ, ಬರೆದಾರೆ** (ಜಾನಪದ ಗೀತೆಗಳ ಸಂಗ್ರಹ)
ಸಂಪಾದಕರು : ಸಾಹಿತ್ಯಾನಂದ, ನಿವೇದಿತ ಪ್ರಕಾಶನ ಸುಬ್ರಹ್ಮಣ್ಯನಗರ,
ಬೆಂಗಳೂರು-560 010, ಬೆಲೆ : 5 ರೂ.

**ಕಾಶಿಯಲ್ಲಿ ಕಂಡದ್ದೇನು** (ಕತೆಗಳು)
—ಸರಿತಾಕುಸುಮಾಕರ ದೇಸಾಯಿ, ಸಂಜೀವಿನಿ ಪ್ರಕಾಶನ
ಗುಲ್ಬರ್ಗ. ಬೆಲೆ : 7 ರೂ.

**ಧ್ರುವ ಮಿಲನ** (ಆಯ್ದ ಕತೆಗಳು)
—ಸರಿತಾದೇಸಾಯಿ, ಸ್ವಯಂಜ್ಯೋತಿ ಪ್ರಕಾಶನ,
ಕಲ್ಬುರ್ಗಿ, ಬೆಲೆ : 10 ರೂ.

**ಅನಾವರಣ** (ಕವನ ಸಂಕಲನ)
—ಬಾ. ಹ. ರಮಾಕುಮಾರಿ, ಕವಿತಾ ಪ್ರಕಾಶನ, ಕ್ಯಾತಸಂದ್ರ,
ತುಮಕೂರು ಜಿಲ್ಲೆ, ಬೆಲೆ : 5 ರೂ.

**ಬಹುಮಾನ** (ಮಕ್ಕಳ ನಾಟಕ)
—ಮೋಹನ್ ವೆರ್ಣೇಕರ್, ಹರೀಶ ಪ್ರಕಾಶನ 86, 6ನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು-560 010, ಬೆಲೆ : 2 ರೂ.

**ಸೀತಾಯಣ** (ವಿಚಾರ)
—ಪೋಲಂಕಿ ರಾಮಮೂರ್ತಿ, ವಿಚಾರಿ ಪ್ರಕಾಶನ. ಎರಡನೇ ಅಡ್ಡರಸ್ತೆ,
ಗಾಂಧಿ ಬಜಾರ್, ಶಿವಮೊಗ್ಗ-2, ಬೆಲೆ : 8 ರೂ.



# ಕನಸಿಗೊಂದು ಕಣ್ಣು

## ಹುಚ್ಚುಮನಸ್ಸಿನ ಸುತ್ತ

ನಾವು ನನಸುಗಳಿಂದ ಸುಖಪಡೆಯುವುದಿರಲಿ, ಕನಸುಗಳಿಂದಲೂ ರಾತ್ರಿಯೆಲ್ಲ ಥ್ರಿಲಿಂಗ್‌ಗಳಲ್ಲಿ ಸುತ್ತಾಡುವ ಅವಕಾಶಗಳನ್ನು ಕಳೆದುಕೊಂಡಿದ್ದೇವೆ. ಯಾಕೆಂದರೆ ನಮ್ಮೆಲ್ಲ ಅಸಂಬದ್ಧತೆಗಳ ಮೂಲಕವೋ ಅಥವಾ ಇನ್ನಾವ ಕಾರಣಕ್ಕಾಗಿಯೋ ನಿದ್ದೆಯಿಂದಲೂ ವಂಚಿತರಾಗಿರುವುದರಿಂದ ಕನಸುಗಳು ಬೇರುಬಿಡುವ ನೆಲ ಬರಡಾಗಿದೆ. ಆಗ ಈ ಕನಸಿಗೊಂದು ಕಣ್ಣಿನಿಂದ ಯಾವ ಅಮಿತಾನಂದವನ್ನು ಪಡೆಯಲು ಸಾಧ್ಯ? ಬಹಳ ಹೆಚ್ಚೆಂದರೆ ಅವರಿವರ ಬಂಜೆತನವನ್ನೋ ಅಥವಾ ದುಃಖವನ್ನೋ ನೋಡಿ ವಿಷಾದ ತುಂಬಿಕೊಳ್ಳುವುದು ಮಾತ್ರ ಸಾಧ್ಯವಾಗಿರುತ್ತೆ.

ಮೊನ್ನೆ ಭಾನುವಾರ ನ್ಯಾಷನಲ್ ಕಾಲೇಜಿನ ಮೈದಾನದಲ್ಲಿ ಮೊರಾರ್ಜಿಯ ಭಾಷಣವನ್ನು ಕೇಳಿ ಥ್ರಿಲ್ ಆದೆ. ಈ ವಯಸ್ಸಿನಲ್ಲಿ ಎಷ್ಟೊಂದು ರೋಮಾಂಚಕಾರಿ ಯಾಗಿ ಮಾತಾಡಬಲ್ಲ ಅನ್ನಿಸಿತು. ಭವಿಷ್ಯ ಭಾರತದ ಬಗ್ಗೆ ಆತನ ಆಶಾವಾದದ ಧ್ವನಿಯನ್ನು ಕೇಳಿ ಅಚ್ಚರಿಗೊಂಡೆ.

ನಮ್ಮ ಸುತ್ತಲಿನ ಭ್ರಷ್ಟತೆಯನಡುವೆ ಗಾಂಧೀ, ನೆಹರೂ, ಲೋಹಿಯಾ ಮತ್ತು ಜಯಪ್ರಕಾಶರಂಥವರು ಇಲ್ಲದಿರುವಾಗ; ಮೊರಾರ್ಜಿಯಂಥ ಗಾಂಧೀವಾದಿಯನ್ನು ಹುಚ್ಚೆ ಕುಡಿಯುತ್ತಾರೆ ಎಂಬುದನ್ನು ಕ್ಲಿಷ್ಟಗೊಳಿಸಿ ಒಬ್ಬ ವ್ಯಕ್ತಿಯನ್ನು ಅರ್ಥಮಾಡಿ ಕೊಳ್ಳದೆ ದೂರಸರಿಯುತ್ತೇವೆ. ಪ್ರತಿಯೊಬ್ಬ ಮನುಷ್ಯನಿಗೂ ಬದುಕುವ ಹಾದಿಯಲ್ಲಿ ನಾನಾ ತೆವಲುಗಳಿರುತ್ತವೆ ಎಂಬುದನ್ನು ಯೋಚಿಸುವುದಿಲ್ಲ. ನಮ್ಮ ಕೆಲವು ಕಾಫೀಯನ್ನೂ ಕುಡಿಯದ ಗೆಳತಿಯರು ಬಿಯರ್‌ನ್ನು ಕತ್ತೆಯ ಉಚ್ಚೆಗೆ ಹೋಲಿಸಿದಾಗ ನಾವೇನೂ ಪ್ರತಿಕ್ರಿಯಿಸಲಾರದೆ ಅಥವಾ ಕೃಷ್ಣನ ಮಾಟದ ನಗುವಿನಂತೆ ನಕ್ಕು ಸುಮ್ಮನಾಗುತ್ತೇವೆ.

ಮೊರಾರ್ಜಿಯ ಭಾಷಣದ ಪ್ರಭಾವ ಈ ಎಲ್ಲದರ ಗುಂಗಿನಲ್ಲಿ ನರಳುವಂತೆ ಮಾಡಿತ್ತು. ಇದಕ್ಕೆ ಮೊರಾರ್ಜಿಯ ವಯಸ್ಸು ಸಹ ಕಾರಣ ವಿರಬಹುದು. ಇದರ ನಡುವೆಯೋ ವಿಂಬಲ್ಡನ್‌ನಲ್ಲಿ ಜಾನ್ ಮೆಕೆನ್ರೋ ತನ್ನ ಗೆಲುವಿನ ಚಿನ್ನದ ಬಣ್ಣದ (ಪೂರ್ಣ ಚಿನ್ನದ್ದೇ ಇರಬಹುದು,) ಪಾರಿತೋಷಕಕ್ಕೆ ಮುತ್ತಿಡುತ್ತ ಓಡಾಡುತ್ತ ಲಕ್ಷಾಂತರ ಕಣ್ಣುಗಳಲ್ಲಿ ತುಂಬಿಕೊಂಡ ಪರಿಯನ್ನು ಕಂಡು ಅಚ್ಚರಿಗೊಂಡಿದ್ದೆ. ಆಗ ನನ್ನ ಪಕ್ಕದಲ್ಲಿದ್ದ ಮೆಚ್ಚಿನ ಗೆಳೆಯ ಇಂದು ಜಾನ್ ಮೆಕೆನ್ರೊ ಪ್ರಪಂಚದ ಜನತೆಯ ಕಣ್ಣುಗಳಲ್ಲಿ ಎಲಿಜಬೆತ್ ರಾಣಿಗಿಂತ ದೊಡ್ಡವನಲ್ಲವೇ ? ಎಂದಾಗ, ಹೌದು ಎಂದೆ. ಆಗ ಇದೇ ಸಮಯದಲ್ಲಿ ದೂರದರ್ಶನವನ್ನು ಬಿಟ್ಟು ಬೀದಿಗಿಳಿದಾಗ; ಪ್ರಾಣ ಭಯವನ್ನು ಮರೆತು ಬಸ್ಸು ಹತ್ತುವ ಮತ್ತು ಇಳಿಯುವುದನ್ನೂ ನೋಡ ತೊಡಗಿದ್ದೆ. ನಾನು ನೋಡುವ ವೈಖರಿ ನನ್ನೊಡನಿದ್ದ ಗೆಳೆಯ "ಶೂದ್ರ ಕನಸಿಗೊಂದು ಕಣ್ಣಿಗೆ ವಿಷಯ ಸಂಗ್ರಹಿಸುತ್ತಿದ್ದಾನೆ" ಎಂದಾಗ ನಗುಬಂತು. ಮತ್ತೊಬ್ಬ "ನಮಗೆ ಕನಸೆ ಬೀಳುವುದಿಲ್ಲವಲ್ಲ" ಎಂದು ಪ್ರೀತಿಯಿಂದ ಚುಚ್ಚಿದಾಗ ನಕ್ಕು ಸುಮ್ಮನಾದೆ. ಆದರೆ ಆ ಬಸ್ಸು ಹತ್ತುವ ಪ್ರಯಾಣಿಕರ ನಡುವೆ ನನಗೆ ಕಾಣಿಸಿ ಕೊಂಡಿದ್ದು ಒಬ್ಬ ಹುಚ್ಚು ಹುಡುಗ.

ಮನುಷ್ಯನ ಹುಚ್ಚುತನ ನಾನಾ ರೀತಿಯದಿರಬಹುದು. ಕೆಲವರು ಅರೆ ಹುಚ್ಚರಾಗಿರ ಬಹುದು ಅಥವಾ ಕೆಲವರು ಸದಾಮೌನಿಗಳಾಗಿಯೋ ಇಲ್ಲವೇ ಬಡ ಬಡ ಮಾತಾಡು ವುದರ ಮೂಲಕ ಸಮಾಜಕ್ಕೆ ಹುಚ್ಚರಾಗಿ ಕಂಡಿರಬಹುದು. ಆದರೆ ಇವರು ಒಂದು ಹಂತದಲ್ಲಿ ಬದುಕುತ್ತಿರುತ್ತಾರೆ. ಈ ಬದುಕನ್ನು ಕಳೆದುಕೊಂಡ ಹುಚ್ಚು ಮಂದಿಯನ್ನು ಕಂಡು ಮಜಾತೆಗೆದುಕೊಳ್ಳುವ ಜನರನ್ನು ಕಂಡಾಗ ಅಸಹ್ಯವೆನ್ನಿಸುತ್ತೆ.

ದಿನನಿತ್ಯ ನಾವು ಒಂದಲ್ಲ ಒಂದು ವಿಧದಲ್ಲಿ ನಾನಾರೀತಿಯ ಹುಚ್ಚರನ್ನು ನೋಡುತ್ತಿರುತ್ತೇವೆ. ನನಗಂತೂ ಹುಚ್ಚಾಸ್ಪತ್ರೆಯನ್ನು ದಾಟಿಯೂ ಹೋಗ ಬೇಕಾಗಿರುವುದರಿಂದ ಇವರನ್ನು ಬಿಟ್ಟು ಬದುಕಲು ಆಗುವುದೇ ಇಲ್ಲವೇನೊ ಎಂಬ ತೀರ್ಮಾನಕ್ಕೆ ಬಂದಿದ್ದೇನೆ.

ನಾಲ್ಕೈದು ದಿನಗಳ ಹಿಂದೆ ಹುಚ್ಚಾಸ್ಪತ್ರೆಯ ಹತ್ತಿರ ಒಂದಷ್ಟು ಜನ ಬಸ್ಸು ಹತ್ತಿ ದರು. ಅವರೆಲ್ಲರೂ ಹುಚ್ಚರಲ್ಲ. ಆದರೆ ಸುಮಾರು ನಲವತ್ತೈದು ವರ್ಷದ ಹೆಂಗಸೊಬ್ಬಳು ಮೂರು ಜನರನ್ನು ಬಸ್ಸಿಗೆ ಹತ್ತಿಸಿದಳು. ನಾನು ಸ್ವಲ್ಪ ಮುಂದೆಯೇ ನಿಂತಿದ್ದರಿಂದ ಅವರು ನನ್ನ ಪಕ್ಕದಲ್ಲಿಯೇ ನಿಂತಿರುವ ಅವರಿಗೆ ನಿಲ್ಲಲಾಗಲೀ ಕೂಡುವುದಕ್ಕಾಗಿ ಯಾಗಲಿ ಆಗುತ್ತಿರಲಿಲ್ಲ. ಆ ಮೂರು ಮಂದಿಯೂ ಹತ್ತಿಸಿದ ಹೆಣ್ಣಿನ ತದ್ರೂಪಿ ಗಳಾಗಿದ್ದರು. ಇದರಿಂದ ಆಕೆ ಈ ಮಕ್ಕಳ ತಾಯಿಯಾಗಿರಬಹುದೆಂದುಕೊಂಡೆ.

ಇವರೊಡನೆ ಹೋರಾಡಿ ಹೋರಾಡಿ ಆಕೆಯ ಮುಖದ ಮೇಲೆ ಒಂದು ನೆಮ್ಮದಿಯ ಗೆರೆಯೂ ಗೋಚರಿಸುತ್ತಿರಲಿಲ್ಲ. ಬಸ್ಸಿನಲ್ಲಿದ್ದವರೆಲ್ಲ ಆಕೆಯ ಕಡೆಗೆ ಕರುಣೆಯಿಂದ ನೋಡುವಾಗಲು ಅವರಿಂದ ಪರಕೀಯಳಾಗಿದ್ದಳು. ತನ್ನ ಮಕ್ಕಳನ್ನು ಸರಿಯಾಗಿ ನಿಲ್ಲಿಸಲು ಹೋರಾಟ ನಡೆಸಿದ್ದಳು. ಆ ಮಕ್ಕಳು ಸಹ ಹದಿನೆಂಟುವರ್ಷಕ್ಕಿಂತ ಮೇಲ್ಪಟ್ಟವರಾಗಿದ್ದರು.

ಕಳೆದ ಹತ್ತುವರ್ಷಗಳಿಂದ ನನ್ನೂರಿನಿಂದ ಬರುವಾಗ ಒಬ್ಬ ಹುಡುಗನನ್ನು ನೋಡುತ್ತಲೇ ಬಂದಿದ್ದೇನೆ. ಎರಡು ಮೂರು ವರ್ಷ ದಿನಾ ನೋಡುತ್ತಲೇ ಇದ್ದೆ. ಯಾಕೆಂದರೆ ದಿನಾ ಊರಿನಿಂದ ಬರುತ್ತಿದ್ದುದರಿಂದ. ಆಗ ವಿಚಿತ್ರ ರೀತಿಯ ತಲೆ ನೋವನ್ನು ಎದುರಿಸಬೇಕಾಗಿತ್ತು. ಬಸ್ಸು ಅಲ್ಲಿಂದಲೇ ಹೊರಡುತ್ತಿದ್ದುದರಿಂದ ಹೊರಡುವ ತನಕ ಆ ಹುಚ್ಚು ಹುಡುಗನನ್ನು ಬಸ್ಸಿನಲ್ಲಿದ್ದವರೆಲ್ಲ ರೇಗಿಸುತ್ತಿದ್ದರು. ಅದಕ್ಕೆ ಪ್ರತಿಯಾಗಿ ಅವನೂ ಒಂದೇ ಸಮನೆ ಮಾತಾಡುತ್ತಿದ್ದ. ಅವನ ಬಾಯಿಂದ ಬರೀ ಪೋಲಿಶಬ್ದಗಳೇ ಬರುತ್ತಿದ್ದುವು. ಬಸ್ಸಿನಲ್ಲಿ ದೊಡ್ಡವರಿರಲಿ, ಚಿಕ್ಕವರಿರಲಿ ಅಥವಾ ಹೆಂಗಸರೇ ಇರಲಿ ಈ ಪೋಲಿ ಮಾತುಗಳನ್ನು ಬಾಯ್ಬಿಟ್ಟುಕೊಂಡು ಕೇಳು ತ್ತಿದ್ದರು. ಈ ರೀತಿ ಅವನನ್ನು ಪ್ರೋತ್ಸಾಹಿಸಿ ಪೂರ್ಣ ಪ್ರಮಾಣದ ಹುಚ್ಚನನ್ನಾಗಿ ಮಾಡಿಟ್ಟಿದ್ದಾರೆ ಅನಿಸಿತು.

ಬಸ್ಸಿನ ಚಾಲಕನೂ ಅಷ್ಟೇ ಯಾವಾಗಲೂ ಅದೇ ಮಾರ್ಗವಾಗಿರುವುದರಿಂದ ಆ ಹುಚ್ಚ ಹುಡುಗನ ಬಗ್ಗೆ ಎಲ್ಲಿಲ್ಲದ ಮಮತೆ. ಇದರಿಂದ ಅವನನ್ನು ಬಸ್ಸಿನಲ್ಲಿ ಹತ್ತಿಸಿಕೊಳ್ಳುವುದು. ತಂದುಬಿಡುವುದು.

ಕಳೆದವಾರ ನನ್ನೂರಿಗೆ ಮೂರು ಕಿಮೀ. ದೂರದಲ್ಲಿರುವ ಹಳ್ಳಿಗೆ ಹೋಗಿದ್ದೆ. ಅವನ ಹುಚ್ಚಾಟಗಳನ್ನು ಮತ್ತು ಆ ಪೋಲಿ ಶಬ್ದಗಳನ್ನು ಸಹಿಸುವುದೇ ಕಷ್ಟವಾಯಿತು. ಅವನೆಲ್ಲ ಪೋಲಿ ಶಬ್ದಗಳಿಗಿಂತ, ಅವನ ವಕ್ರತೆಗಳು ನನ್ನನ್ನೇ ಹುಚ್ಚನನ್ನಾಗಿಸುವ ಮಟ್ಟಕ್ಕೇರಿತ್ತು. ಎಷ್ಟು ಆರಾಮವಾಗಿ ಅವನನ್ನು ಕೊಲೆಮಾಡುತ್ತಿದ್ದೇವೆ ಅನ್ನಿಸಿತು. ಬಸ್ಸಿನಲ್ಲಿ ಓಡಾಡುತ್ತ ನನ್ನ ಹತ್ತಿರ ಬಂದ. ನಾನು ಸಿಟ್ಟಿನಿಂದ ಇನ್ನೊಮ್ಮೆ ಈ ರೀತಿ ಮಾಡಿದರೆ ಎರಡು ಬಿಡ್ತೀನಿ ಎಂದೆ. ಸ್ತಬ್ಧನಾದ ಆಶ್ಚರ್ಯವಾಯಿತು. ನನ್ನ ಮಾತಿಗೆ ಒಂದಷ್ಟು ಪೋಲಿಮಾತುಗಳು ಕಾದಿವೆ ಎಂದುಕೊಂಡೆ. ಆದರೆ ಅವನು ಪ್ರತಿಕ್ರಿಯಿಸಲಿಲ್ಲ. ಅವನನ್ನು ಎಂದೂ ಹುಚ್ಚಾಸ್ಪತ್ರೆಗೆ ಸೇರಿಸಲಿಲ್ಲವೆ? ಮನುಷ್ಯ ತನ್ನ ಮನರಂಜನೆಗಾಗಿ ಹೇಗೆ ಅರೆ ಹುಚ್ಚರನ್ನು ಪೂರ್ಣ ಪ್ರಮಾಣದ ಹುಚ್ಚರನ್ನಾಗಿ ಮಾಡಿ ಮತ್ತೆ ಬದುಕಿಗೆ ವಾಪಸ್ಸು ಬರುವಂತೆ ಮಾಡ್ತಾರೆ ಅನ್ನಿಸಿತು.

14-7-84

—ಶೂದ್ರಶ್ರೀನಿವಾಸ್

# ಕರ್ನಾಟಕ ಕಲಾಯಾತ್ರೆ

ನಮ್ಮ ಸಾಂಸ್ಕೃತಿಕ ರಂಗದಲ್ಲಿ ಇತ್ತೀಚೆಗೆ ಚಿಲ್ಲರೆ ರಾಜಕೀಯಕ್ಕೆ ಕೊರತೆಯಿಲ್ಲ. ಇದು ಬೇಕೇ ಬೇಕು ಎಂದು ಯಾರೂ ನೇರವಾಗಿ ಹೇಳದಿದ್ದರೂ; ಇದು ಮಾಡ ದಿದ್ದರೆ ತಾವು ತಿಂದದ್ದು ಜೀರ್ಣವಾಗುವುದಿಲ್ಲ ಎನ್ನುವ ಮಟ್ಟಿಗೆ ಕೆಲವರು ಬೆಳೆದಿ ದ್ದಾರೆ. ಇದು ಅವರು ಅಮ್ಮನ ಹೊಟ್ಟೆಯಿಂದ ಅಂಟಿಸಿಕೊಂಡು ಬಂದ ರೋಗವಂತೂ ಅಲ್ಲ. ಅದೇನೆ ಇರಲಿ ಚಿತ್ರಬಿಡಿಸುವ ಮಂದಿ ಸ್ವಲ್ಪ ಕಡಿಮೆ ರಾಜಕೀಯದ ಮಂದಿ ಅನ್ನಿಸುತ್ತೆ. ಯಾಕೆಂದರೆ ರಾಜಕೀಯ ಮಾಡುವುದರಿಂದ ಬಣ್ಣಗಳ ವೈವಿಧ್ಯಮಯತೆ ಯನ್ನೇ ಗುರುತಿಸದೇ ಹೋಗಬಹುದು.

ನಮ್ಮ ಸುತ್ತಲೂ ಬೆಳೆದಿರುವ-ಬೆಳೆಯುತ್ತಿರುವ ಕಲಾವಿದ ಗೆಳೆಯರು ನಿಜ ವಾಗಿಯೂ ಕ್ರಿಯಾಶೀಲರು. ಕರ್ನಾಟಕದ ಮಟ್ಟಿಗಂತೂ ನಾವು ಹೆಮ್ಮೆಪಟ್ಟು ಕೊಳ್ಳುವಷ್ಟರ ಮಟ್ಟಿಗೆ ಕೆಲವರು ಬೆಳೆದಿದ್ದಾರೆ.

ಪ್ರತಿಯೊಬ್ಬ ಸೂಕ್ಷ್ಮಜ್ಞನೂ ತಾನು ಹೆಚ್ಚು ಹೆಚ್ಚು ಏಕಾಂಗಿಯಾಗಬೇಕೆಂದು ಬಯಸಿದಂತೆ ಸಾರ್ವತ್ರಿಕವಾಗಿ ತನಗರಿವಿಲ್ಲದಂತೆ ಜನರೊಡನೆ ಬೆರೆಯಲು ತೊಡಗುವನು. ಮತ್ತೆ ಅಲ್ಲಿ ಬೆರೆಯಲಾಗದೆ ಪರಕೀಯತೆಯಿಂದ ನರಳುತ್ತ ಏಕಾಂತತೆಗೆ ಹಿಂದಿರುಗು ವುದು ಒಟ್ಟು ಮನುಷ್ಯನ ಸ್ವಭಾವದಲ್ಲಿಯೇ ಸ್ವಾಭಾವಿಕವಿರಬಹುದು. ಒಬ್ಬ ನಿಜವಾದ ಕಲಾವಿದ ಸದಾ ಇಂಥ ಗುಣಗಳಿಂದ ಅತೀತನಾಗಿರುವುದಿಲ್ಲ. ನಮ್ಮ ಅರೆಸಿದ್ಧಾಂತ ವಾದಿಗಳು ಇದನ್ನು 'ಪ್ರತಿಗಾಮಿ' ಧೋರಣೆ ಎಂದು ಕರೆಯಬಹುದು. ಯಾಕೆಂದರೆ ಅವರಿಗೆ ಆ 'ಪ್ರತಿಗಾಮಿ' ಶಬ್ದ ಬಾಯಿಪಾಠವಾಗಿ ಬಿಟ್ಟಿರುತ್ತೆ. ಈಮಾತನ್ನು ಇಲ್ಲಿ ಹೇಳುವ ಉದ್ದೇಶ ಇಷ್ಟೆ: ಮೇಲಿನ ಎಲ್ಲಾ ಗೊಂದಲಗಳನ್ನು ತುಂಬಿಕೊಂಡ ಕೆಲವು ಕಲಾವಿದ ಮನುಷ್ಯರಿದ್ದಾರೆಂಬ ಕಾರಣಕ್ಕಾಗಿಯೇ ಕಲಾಯಾತ್ರೆಯ ಬಗ್ಗೆ ನಾಲ್ಕುಮಾತು ಆತ್ಮೀಯವಾಗಿ ಬರೆಯ ಬೇಕೆನ್ನಿಸುತ್ತಿದೆ.

'ಕಲಾಯಾತ್ರೆ' ಪ್ರತಿವರ್ಷಮಾಡಬೇಕೆಂದು ಹಮ್ಮಿಕೊಂಡ ಕಾರ್ಯಕ್ರಮ ವಿಕಲಾರದು. ಅದು ಆ ರೀತಿ ಆಗಬೇಕಾಗಿಯೂ ಇಲ್ಲ. ಆದರೆ ಪ್ರಥಮ ಬಾರಿಗೆ ನಡೆಸಿದ 'ಕಲಾಯಾತ್ರೆ'ಯ ಪರಿಣಾಮ ಅರ್ಥಪೂರ್ಣವಿರಬಹುದು. ಇಡೀ ಕರ್ನಾಟಕದ ವಿವಿಧ ಭಾಗಗಳಲ್ಲಿ ತಮ್ಮ ತೈಲವರ್ಣದ, ಜಲವರ್ಣದ, ಕೊಲ್ಯಾಜ್ ಮತ್ತು ಶಿಲ್ಪ ಕೃತಿಗಳನ್ನು ಪ್ರದರ್ಶಿಸುತ್ತ ನೋಟಕರನ್ನು ತಮ್ಮತ್ತ ಸೆಳೆಯುವ ಕ್ರಮ

ಅಗತ್ಯ, ಯಾಕೆಂದರೆ ಎಷ್ಟೋ ಕಲೆಗಳ ಬಗ್ಗೆ ಈಗಲೂ ನಮ್ಮ ಜನ ಅಪರಿಚಿತರಾಗೇ ಉಳಿದಿದ್ದಾರೆ. ಇಲ್ಲಿ ವಿದ್ಯಾವಂತ—ಅವಿದ್ಯಾವಂತ ಎಂಬ ಪ್ರಶ್ನೆ ಉದ್ಭವಿಸುವುದಿಲ್ಲ ಅನ್ನಿಸುತ್ತೆ. ಯಾವ ರೀತಿಯ ಸ್ವೀಕೃತ ಮನೋಭಾವನೆಯನ್ನು ಬೆಳೆಸಿರುತ್ತೇವೆ ಎಂಬುದರ ಮೇಲೆ ಅವಲಂಬಿಸಿರುತ್ತೆ.

ಕರ್ನಾಟಕದಲ್ಲಿ ವೆಂಕಟಪ್ಪ, ಹೆಬ್ಬಾರ್, ರುಮಾಲೆ, ಹಡಪದ್ ಮತ್ತು ವಾಸುದೇವ್ ನಮಗೆ ಅಪರಿಚಯಸ್ಥರೇನೂ ಅಲ್ಲ. ಇವರ ಮೂಲಕ ನಾನಾ ರೀತಿಯ ಚಿಂತನ ಶೀಲ ವಿದ್ಯಾರ್ಥಿಗಳು ಮುಂದೆಬರುವಂತಾಯಿತು. ಅದರಲ್ಲೂ ಇತ್ತೀಚಿನ ದಿನಗಳಲ್ಲಿ ಹೆಬ್ಬಾರ್, ಹಡಪದ್, ವಾಸುದೇವ್ ಮತ್ತು ಷೆಣೈರವರ ಕೊಡುಗೆ ಈ ದಿಕ್ಕಿನಲ್ಲಿ ಅಪೂರ್ವವಾದದು. ಇಲ್ಲಿಯ ಕಲೆಯ ಚಳುವಳಿಗೆ ಸ್ಥಳೀಯ ಶಾಲೆಗಳ ಜೊತೆಗೆ ಹೊರಗಿನ ಜೆ. ಜೆ. ಕಲಾಶಾಲೆ, ಬರೋಡ ಕಲಾಶಾಲೆ, ಹಾಗೂ ಶಾಂತಿನಿಕೇತನ ಪೂರಕವಾಗಿರಬಹುದು. ಆದ್ದರಿಂದ ಒಬ್ಬ ವ್ಯಕ್ತಿಯ ಚಿಂತನಾಕ್ರಮದ ಮೇಲೆಯೇ ಪ್ರಭಾವ ಬೀರುವಂತಹ ವ್ಯಕ್ತಿಗಳು ಮತ್ತು ಸಂಸ್ಥೆಗಳು ಕೆಲಸಮಾಡಿವೆ. ಹಾಗೆಯೇ ವಸ್ತು ಮತ್ತು ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಭಿನ್ನಾಭಿಪ್ರಾಯಗಳೂ ತಲೆದೋರಿವೆ. ಇದು ಅನಾರೋಗ್ಯವೇನೂ ಅಲ್ಲದಿರಬಹುದು. ಆದರೆ ಇದರಿಂದ ಕಾಕಾಪುಡಿತನ ಬೆಳೆಯಬೇಕಾಗಿಲ್ಲ.

'ಕಲಾಯಾತ್ರೆ' ಚಳುವಳಿಗೆ ಇತ್ತೀಚಿನ ವರ್ಷಗಳಲ್ಲಿ ಕಲೆಯ ಪ್ರಕಾರದಲ್ಲಿ ಸಾರ್ಥಕ ಕೆಲಸವನ್ನು ಮಾಡಿದ 'ಕಲಾಮೇಳ' ಹಿನ್ನೆಲೆಯಾಗಿರಬಹುದು. ಒಂದು ದೃಷ್ಟಿಯಿಂದ ಇದು ಹಿನ್ನೆಲೆಯಾಗಿರುವುದರಿಂದ 'ಕಲಾಯಾತ್ರೆ'ಯಲ್ಲಿ ಸಾಕಷ್ಟು ಸತ್ವಪೂರ್ಣ ಕಲಾವಿದರನ್ನು ಗುರ್ತಿಸಬಹುದಾಗಿದೆ. ಮೂವತ್ತು ಮತ್ತು ಐವತ್ತು ವರ್ಷದೊಳಗಿನ ವಿಭಿನ್ನ ಅಭಿರುಚಿಯನ್ನು ರೂಢಿಸಿಕೊಂಡಿರುವ ಕಲಾವಿದರೂ ಇಲ್ಲಿದ್ದಾರೆ. ಆದ್ದರಿಂದಲೇ ಒಂದುರೀತಿಯ ವೈವಿಧ್ಯಮಯತೆಯನ್ನು ಬರಮಾಡಿಕೊಳ್ಳಲು ಸಾಧ್ಯವಾಗಿರುವುದು.

ಕಲಾಯಾತ್ರೆಯಲ್ಲಿ ಭಾಗವಹಿಸಿದ ಎ. ಜಿ. ಅಂದಾನಿ, ಸಿ. ಚಂದ್ರಶೇಖರ. ಎಸ್. ಧನಲಕ್ಷ್ಮಿ, ಆರ್. ಎಂ. ಹಡಪದ್, ಜಿ. ಎಸ್. ಖಂಡೇರಾವ್, ಚಿ. ಸು. ಕೃಷ್ಣ ಸೆಟ್ಟಿ, ಪ. ಸು. ಕುಮಾರ್. ಜಿ. ಎಂ. ಎಸ್. ಮಣಿ, ಎನ್. ಮರಿಶಾಮಾಚಾರ್, ಅ. ಲ. ನರಸಿಂಹನ್, ಎಂ. ಬಿ, ಪಾಟೀಲ್, ಶಂಕರಪಾಟೀಲ್, ಕೆ. ಟಿ. ಶಿವಪ್ರಸಾದ್, ವೆಂಕಟಾಚಲಪತಿ, ವಿಜಯಸಿಂಧೂರ್, ಹಾಗೂ ಎ. ಯೂಸಫ್ ಇದ್ದಾರೆ. ಒಟ್ಟು ಹದಿನಾರು ಮಂದಿಯ ತಂಡದಲ್ಲಿ ಬೇರೆಯವರು ಯಾಕೆ ಭಾಗವಹಿಸಲಿಲ್ಲ ಎಂಬ ಪ್ರಶ್ನೆ ಸ್ವಾಭಾವಿಕವಾಗಿ ಉದ್ಭವಿಸಬಹುದು. ಕಾರಣ: ಅವರು ಸಹ ಇಲ್ಲಿಯವರಷ್ಟೇ ಗಟ್ಟಿಯಾಗಿ ತಮ್ಮ ಪ್ರಕಾರದಲ್ಲಿ ಕಂಡುಕೊಳ್ಳುತ್ತಿರುವವರು ಅಥವಾ ಕಂಡುಕೊಂಡವರು.

ಉದಾಹರಣೆಗೆ ಹೆಬ್ಬಾರ್, ಚಂದ್ರನಾಥ್ ವಾಸುದೇವ್, ಶೆಣೈ, ರಮೇಶ್‌ರಾವ್, ದೇವಡಿಗಾರ್, ಕಮಲೇಶ್, ರಾಮದಾಸ ಆದ್ಯಂತಾಯ, ಶಾಮಸುಂದರ್, ಸುಬ್ಬಣ್ಣ, ಬಾಸ್ಕರರಾವ್, ಸುರೇಶ್, ದೇಶಪಾಂಡೆ ಹಾಗೂ ಪುಷ್ಪಮಾಲ ಮತ್ತು ಶೀಲಾಗೌಡ ಮುಂತಾದವರನ್ನು ಹೆಸರಿಸಬಹುದು.

ಸುಮಾರು ಆರು ತಿಂಗಳಕಾಲ ರಾಜ್ಯದ ಇಪ್ಪತ್ತೆಂಟು ವಿವಿಧ ಕೇಂದ್ರಗಳಲ್ಲಿ ಮೂರು ನಾಲ್ಕು ದಿನ ಪ್ರದರ್ಶನವೇರ್ಪಡಿಸುವುದು ನಿಜವಾಗಿಯೂ ಕಷ್ಟದ ಕೆಲಸ. ಅಂಥ ಕೆಲಸವನ್ನು ಕಲಾಯಾತ್ರೆ ಮಾಡಿದೆ. ಪ್ರದರ್ಶನಕ್ಕೆ ತಮ್ಮನ್ನು ಮಿತಿಗೊಳಿಸಿ ಕೊಳ್ಳದೆ ಕಲಾಕೃತಿಗಳ ಮಾರಾಟಕ್ಕೆ ವ್ಯವಸ್ಥೆಮಾಡಿಕೊಂಡ ಕ್ರಮವು ಮುಖ್ಯ. ಇದರಿಂದ ನಮ್ಮ ಕಲಾವಿದರ ಚಿತ್ರಗಳು ರಾಜ್ಯದ ಮೂಲೆ ಮೂಲೆಗಳಲ್ಲಿ ಕಾಣಿಸಿಕೊಳ್ಳುವುದು ಸಂಗತವಾದದ್ದೇ. ಯಾಕೆಂದರೆ ದರಿದ್ರ ಕ್ಯಾಲೆಂಡರ್ ಅಭಿರುಚಿ ಬೆಳೆಯುತ್ತಿರುವ ಈ ಕಾಲದಲ್ಲಿ ಪ್ರತಿಯೊಬ್ಬ ಸಾಂಸ್ಕೃತಿಕ ವಕ್ತಾರನೂ ಮಾಡಬೇಕಾದ ಕೆಲಸವಿದು. ಇದರ ಜೊತೆಗೆ ಕಲೆಯೆಂದರೆ ಬರೀ ಭಾವ ಚಿತ್ರಗಳು ಮಾತ್ರವಲ್ಲ. ಅದರ ಹಿಂದಿನ ನಾನಾ ರೀತಿಯ ವೈಲಕ್ಷಣಗಳು ಬದುಕಿನ ಭಾವ ತೀವ್ರತೆಯಲ್ಲಿ ಗಾಢವಾಗಿ ಅಡಕವಾಗಿರುತ್ತವೆ ಎಂಬುದನ್ನು ತೋರಿಸಿಕೊಡುವುದು ಮುಖ್ಯವಾಗಿರುತ್ತೆ.

ಇಂಥ ಭಾವವಾಸಂಬಂಧಗಳ ಕಾರ್ಯಕ್ರಮವನ್ನು ಕಲಾಯಾತ್ರೆಯ ಗೆಳೆಯರು ಹಮ್ಮಿಕೊಂಡು ನಡೆಸಿದ್ದಕ್ಕೆ ಪ್ರತ್ಯೇಕವಾದ ಪ್ರಮಾಣ ಪತ್ರ ಬೇಕಾಗಿಲ್ಲ. ರಾಜ್ಯದ ಸಾವಿರಾರು ನೋಟಕರು ಈಗಾಗಲೇ ನಾನಾರೂಪದಲ್ಲಿ ಪ್ರಶಸ್ತಿಗಳನ್ನು ನೀಡಿದ್ದಾರೆ. ಈ ರೀತಿಯ ಕಲಾಯಾತ್ರೆಯನ್ನು ನಡೆಸುವುದು ಪ್ರತಿವರ್ಷದ ಘೋಷಣೆಯಾಗದಿದ್ದರೂ ಚಿಂತೆಯಿಲ್ಲ, ಮೂರು ನಾಲ್ಕು ವರ್ಷಕ್ಕೊಮ್ಮೆಯಾದರೂ ನಡೆಸಲೆಂದು ಬಯಸಬಹುದಲ್ಲವೇ?

—ಶೂದ್ರ

ಜೂನ್ ತಿಂಗಳಲ್ಲಿ 'ಶೂದ್ರ'ದ ವೇದಿಕೆಯಿಂದ ಅರಸುರವರ ಬಗ್ಗೆ ನಡೆದ ವಿಚಾರಸಂಕಿರಣದ ಪ್ರಬಂಧಗಳನ್ನು ಪುಸ್ತಕರೂಪದಲ್ಲಿ ಆಗಸ್ಟ್ 20ರ ಸುಮಾರಿಗೆ ತರಲಾಗುವುದು. —ಸಂ.

# ಒಳನೋಟ

ಮಾರ್ಚ್‌ತಿಂಗಳ ಸಂಚಿಕೆಯಲ್ಲಿ ನಾನು ನಿಸಾರ್ ಅಹಮದ್ ರವರಿಗೆ ಬರೆದ ಪತ್ರಕ್ಕೆ ಸಂಬಂಧಿಸಿದಂತೆ ಶ್ರೀಮತಿ ವಿಜಯಾರವರ ಪತ್ರ ಜೂನ್ ಸಂಚಿಕೆಯಲ್ಲಿ ಪ್ರಕಟವಾಗಿತ್ತು. ಆ ಪತ್ರವನ್ನು ವಿಜಯಾರವರು ನನಗೆ ಬರೆಯುವುದಕ್ಕಿಂತ ಮುಂಚೆ ಅವರಿಗೆ ನಾನೊಂದು ಪತ್ರ ಬರೆದಿದ್ದೆ. ಆ ಪತ್ರ ಬರೆಯುವುದಕ್ಕೂ ವಿಜಯಾರವರ ಒಂದು ಮಾತು ಕಾರಣವಾಗಿತ್ತು. ಆ ಮಾತು ನಿಸಾರ್‌ರವರಿಗೆ ಪೂಸಿ ಹೊಡೆಯಲು ಬರೆದದ್ದು ಎಂದು ಮತ್ತು ಯಾರೂ ಅಧಿಕಾರಕ್ಕೆ ಬಂದರೂ ಅವರನ್ನು ಹೊಗಳಲು ಹೋಗುತ್ತೇವೆ ಎಂಬುದು.

ನಿಸಾರ್‌ರವರಿಗೆ ಬರೆದ ಪತ್ರದಲ್ಲಿ ಆ ರೀತಿಯ ಒಂದು ವಾಕ್ಯವನ್ನೂ ನಾನು ಬರೆದಿಲ್ಲ. ಹಾಗೂ ಕನ್ನಡ ಕಾವ್ಯ ಸಂದರ್ಭದಲ್ಲಿ 'ತುಂಬ ದೊಡ್ಡ ಕವಿ' ಎಂದು ಎಲ್ಲಿಯೂ ಬರೆದಿಲ್ಲ. ಆ ರೀತಿಯ ಆತ್ಮವಂಚನೆಯನ್ನು ನಾನೆಂದು ಮಾಡಿಕೊಂಡಿಲ್ಲ. ಹಾಗೆಯೇ ನೋಡಿದರೆ ಶೂದ್ರ ಪ್ರಾರಂಭಿಸಿದಾಗಿನಿಂದಲೂ ಯಾರನ್ನು ಪೂಸಿಮಾಡಲು ಹೋಗಿಲ್ಲ. ಅದು ನನ್ನ ಜಾಯಮಾನಕ್ಕೆ ಬಂದದ್ದಲ್ಲ. ನನ್ನ ಸುತ್ತಲಿನ ವಕ್ರತೆಗಳ ಬಗ್ಗೆ ಆತ್ಮೀಯವಾಗಿ ಚುಡಾಯಿಸುತ್ತ ಬದುಕುವುದರತ್ತ ನಂಬಿಕೆಯುಳ್ಳವನು. ನನ್ನ ವಕ್ರತೆಗಳ ಬಗ್ಗೆ ಜನ ಆಡಿಕೊಳ್ಳುವಾಗಲೂ ಅಭಿಮಾನದಿಂದ ತೆಗೆದುಕೊಳ್ಳಬೇಕು ಎಂಬುದನ್ನು ರೂಢಿಸಿಕೊಳ್ಳಲು ನಿರತನಾದವನು.

ಯಾರ್‍ಯಾರ ಮಾತನ್ನೋ ಕೇಳಿ ನಾನು ಸಲ್ಲದ ದಾರಿಯಲ್ಲಿ ನಡೆಯುತ್ತಿದ್ದೇನೆ ಎಂದು ವಿಜಯಾರವರು ಬರೆದಿದ್ದಾರೆ. ಈ ರೀತಿಯ ಅಭಿಪ್ರಾಯ ಅವರಿಗೆ ಯಾಕೆ ಬಂತೋ ಗೊತ್ತಿಲ್ಲ. ಹಾಗೇ ನೋಡಿದರೆ ಯಾರೂ ಇಲ್ಲಿಯವರೆವಿಗೂ ನನ್ನನ್ನು ಅಡ್ಡದಾರಿಗೆಳೆಯಲು ಪ್ರಯತ್ನಿಸಿಲ್ಲ. ಕೊನೆಗೂ ನನ್ನ ನಿಷ್ಠೆಯೇ ನನಗೆ ಮುಖ್ಯ. ವಿಜಯಾರವರು ನೇರ ಉದಾಹರಣೆಯಿದ್ದ ಪಕ್ಷದಲ್ಲಿ ತಿಳಿಸಬಹುದು.

ವಿಜಯಾರವರಷ್ಟೇ ಆತ್ಮೀಯ ಗೆಳೆಯ-ಗೆಳತಿಯರು ಬಹಳಷ್ಟು ಮಂದಿ ಇದ್ದಾರೆ. ಅವರು ಶೂದ್ರನಿಗೆ ಸಲಹೆಕೊಡಬಲ್ಲರೇ ವಿನಹ ಒತ್ತಡವನ್ನು ಒಡ್ಡುವವರಲ್ಲ.

ನಿಸಾರ್‌ರವರಿಗೆ ಪತ್ರ ಬರೆದಾಗ, ಪ್ರಕಟಣೆಗೆ ಮುನ್ನ ಯಾರಿಗೂ ತೋರಿಸಲು ಹೋಗಿಲ್ಲ. ತೋರಿಸಿದ್ದರೆ ನಿಜವಾಗಿಯೂ ಪ್ರಕಟಿಸಲು ಅವಕಾಶ ಸಿಗುತ್ತಿರಲಿಲ್ಲ. ಬಹಳಷ್ಟು ಹುಚ್ಚು ಕೆಲಸಗಳನ್ನು ಹುಚ್ಚುಚ್ಚಾಗಿ ಮಾಡಬೇಕಾಗುತ್ತೆ. ಮನುಷ್ಯರ ಹುಚ್ಚುತನಗಳ ಮೂಲಕವೇ ಸಾಹಿತ್ಯ ಜನಿಸುವುದು ಎಂಬುದನ್ನು ಗಾಢವಾಗಿ ನಂಬಿರುವವನು ನಾನು. ಜುಜಿಬಿ ಅಕಾಡೆಮಿಗಳ ಬಗ್ಗೆ ಅಥವಾ ಸಾಹಿತ್ಯ ಪರಿಷತ್ತಿನಂತಹ ಸಂಸ್ಥೆಗಳ ಬಗ್ಗೆ ಯಾಕೆ ವ್ಯಾಮೋಹ ಬೆಳೆಸಿಕೊಳ್ಳಬೇಕು? ನಮ್ಮ ಸಾಹಿತ್ಯಕ ಪತ್ರಿಕೆಗಳು ಈ ಸಂಸ್ಥೆಗಳಿಗಿಂತ ಹಿರಿಯಮಟ್ಟದವು ಎಂಬುದನ್ನು ನಿಜವಾಗಿಯೂ ನಂಬಿದ್ದೇನೆ. ಈ ನಂಬಿಕೆ ಗಾಢವಾಗಿರುವ ತನಕ ಶೂದ್ರ ತರಬಲ್ಲೆ. (ಇದು ಅತಿಯಾದರೆ ಕ್ಷಮಿಸಿ)

ನಮ್ಮ ಸಾರ್ವಜನಿಕ ಸಂಸ್ಥೆಗಳು ಮತ್ತು ಅವರ ವಕ್ತಾರರ ಕಾರ್ಯವೈಖರಿಯ ಬಗ್ಗೆ ಸಿಟ್ಟಿನಿಂದಲೋ, ಅಭಿಮಾನದಿಂದಲೋ ಮಾತಾಡಲಾಗದಿದ್ದರೆ ಮತ್ಯಾವುದರ ಬಗ್ಗೆ ಮಾತಾಡಬೇಕು? ಅಂದು ಹಾ. ಮಾ. ನಾಯಕರ ಅಹಂಕಾರದ ಮಾತುಗಳು ವಿಜಯಾರವರಿಗೆ ಪ್ರಿಯವಾದರೆ (ಪ್ರಿಯವಾಗದಿದ್ದರೂ ಸುಮ್ಮನಾಗುವುದು ಅಸಹ್ಯವಲ್ಲವೆ ?) ನನಗ್ಯಾಕೆ ಪ್ರಿಯವಾಗಬೇಕು? ಯಾರ ಪುಸಲಾವಣೆಯಿಂದಲೂ ಯಾರೂ ಬದುಕಲಾರರು ಅಥವಾ ಸಾಹಿತಿಗಳಾಗಲಾರರು. ನಮ್ಮ ಜೀವ ಸತ್ವದ ನೆಲೆ ಭದ್ರವಾಗಿರುವ ತನಕ ಬರೆಯಬಲ್ಲೆವು-ಬದುಕಬಲ್ಲೆವು ಎಂಬುದನ್ನು ವಿಜಯಾರವರಿಗೆ ಹೇಳಬೇಕಾಗಿಲ್ಲ. ಹಾಗೆಯೇ ಯಾರ್‍ಯಾರು ನಮ್ಮ ಸಾಂಸ್ಕೃತಿಕ ವಲಯದ ಪುಢಾರಿಗಳು ಎಂಬುದು ನನಗಿಂತ ಹೆಚ್ಚು ವಿಜಯಾರವರಿಗೂ ಗೊತ್ತು. ಆದ್ದರಿಂದ ನಿಸಾರ್‌ರವರಿಗೆ ಬರೆದ ಪತ್ರದಿಂದ ಗುಹಾ ಏನೇನೋ ಆಗಿ ಬಿಡುತ್ತೆ ಎಂಬುದನ್ನು ತಿಳಿಯುವ ಅಹಂ ನನಗಿಲ್ಲ,

19-7-84 —ಶೂದ್ರಶ್ರೀನಿವಾಸ್

## ಸುತ್ತಮುತ್ತ

### 'ಕರ್ನಾಟಕದ ರೈತರ ಸಮಸ್ಯೆಗಳು'

—ಒಂದು ವರದಿ

ಇಂದು ರೈತರ ಹೋರಾಟ ಅದರ ಎಲ್ಲ ಸೋಲು ಗೆಲುವುಗಳ ನಡುವೆ ಅರ್ಥ ಪೂರ್ಣ ಘಟ್ಟವನ್ನು ಮುಟ್ಟಿದೆ. ಅಂದರೆ ಕೊನೆಯ ಪಕ್ಷ ಇಲ್ಲಿಯವರೆವಿಗೂ ಹೋರಾಟಕ್ಕಿಳಿಯದ ಇವರು, ಹೋರಾಟದ ಮೂಲಕವೇನಾದರೂ ಪಡೆಯಲು ಸಾಧ್ಯ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ದಕ್ಷಿಣ ಭಾರತದಲ್ಲಿ ರೂಪುಗೊಂಡ ಈ ರೈತ ಚಳುವಳಿ ಸುಮಾರು ಎಲ್ಲಾ ಗ್ರಾಮಗಳಲ್ಲೂ ತಮ್ಮನ್ನು ಕುರಿತು ಚಿಂತಿಸುವಂತೆ ಪ್ರಜ್ಞೆಯನ್ನು ಮೂಡಿಸಿದೆ. ಸಿದ್ಧಾಂತಗಳ ಭಿನ್ನಾಭಿಪ್ರಾಯಗಳ ಮೂಲಕ ನಾವು ಏನೇ ಹೇಳಿದರೂ ; ಎಚ್ಚೆತ್ತ ರೈತ ನಮ್ಮ ಮುಂದಿದ್ದಾನೆ ಎಂಬುದನ್ನು ಮರೆಯುವಂತಿಲ್ಲ. ಒಂದು ಹಂತದಲ್ಲಿ ಈ ಎಲ್ಲ ಹೋರಾಟಗಳು ಜಮೀನ್ದಾರರಿಗೆ ಮಾತ್ರ ಪ್ರಯೋಜನಕಾರಿ ಎಂದರೂ ಸಣ್ಣ ಪ್ರಮಾಣದ ರೈತರಿಗೂ ಪ್ರಯೋಜನವಾಗದಿರದು. ಹಾಗೆ ನೋಡಿದರೆ ಇಂದು 'ಜಮಿನ್ದಾರಿ' ಎಂಬುದೇ ಕುಸಿದು ಬೀಳುತ್ತಿದೆ. ಇನ್ನೊಂದು ದಶಕದೊತ್ತಿಗೆ ಇದರ ಪ್ರಮಾಣ ಮತ್ತಷ್ಟು ಕುಸಿಯುಬಹುದು. ಇನ್ನು ಐವತ್ತು ವರ್ಷಗಳಲ್ಲಿ ಜಮಿನ್ದಾರರು ಎಂಬ ಶಬ್ದ ಚರಿತ್ರೆಯ ಶಬ್ದ ಸಮೂಹಕ್ಕೆ ಮಾತ್ರ ಸೀಮಿತವಾಗಬಹುದು. ಯಾಕೆಂದರೆ ದಿನೇ ದಿನೇ ಪಾಲುದಾರಿಕೆಯ ಮೂಲಕ ಇದ್ದಬದ್ದ ನೆಲ ಹಂಚಿ ಹೋಗಿಬಿಟ್ಟಿರುತ್ತೆ. ಕೇವಲ ಎರಡು ಮೂರು ಎಕರೆಯಷ್ಟಿರುವ ಕುಟುಂಬಗಳೇ ಲಕ್ಷಾಂತರ ಇವೆ. ಆದ್ದರಿಂದ ನಿಜವಾದ ರೈತನ ಸಮಸ್ಯೆಯನ್ನು ಆಳುವ ವರ್ಗ ಅರಿಯಬೇಕಾಗಿದೆ ಎಂಬ ಕೂಗಿನಲ್ಲಿ ಸತ್ಯಾಂಶವಿಲ್ಲದಿಲ್ಲ.

ಈ ಹಿನ್ನೆಲೆಯಲ್ಲಿ 14–7–84 ರಂದು ಶನಿವಾರ 'ಪ್ರಗತಿ' ವೇದಿಕೆಯ ಪ್ರೊ. ಬಿ. ಕೆ. ಚಂದ್ರಶೇಖರ್ ಮತ್ತು ಡಾ॥ ತಿಮ್ಮಯ್ಯನವರು ಏರ್ಪಡಿಸಿದ್ದ 'ಕರ್ನಾಟಕ ರೈತರ ಸಮಸ್ಯೆ' ಎಂಬ ವಿಷಯದ ಬಗೆಗಿನ ವಿಚಾರಸಂಕಿರಣ ಅರ್ಥ ಪೂರ್ಣವಾಗಿತ್ತು.

ಚರ್ಚೆಯಲ್ಲಿ ಪ್ರಧಾನವಾಗಿ ಪ್ರೊ. ನಂಜುಂಡಸ್ವಾಮಿ, ಪ್ರೊ. ನಾಡಕರ್ಣಿ ಮತ್ತು ವಿ. ಎನ್. ಹಳಕಟ್ಟಿಯವರು ಭಾಗವಹಿಸಿದ್ದರು. ಒಟ್ಟು ವಿಷಯವನ್ನು ವಿಷದವಾಗಿ ಮಂಡಿಸಿದ ಪ್ರೊ. ನಂಜುಂಡಸ್ವಾಮಿ ಮತ್ತು ಪ್ರೊ. ನಾಡಕರ್ಣಿಯವರ ಮಾತುಗಳು ಹೆಚ್ಚು ಮನನ ಮಾಡುವಂತಿದ್ದುವು. ಇವರಿಬ್ಬರ ಅಭಿಪ್ರಾಯ ಮಂಡನೆ ಭಿನ್ನ ಭಿನ್ನ ವಾಗಿದ್ದರೂ ವಾಸ್ತವವಾಗಿ ರೈತನನ್ನು ನಿಯಂತ್ರಿಸುತ್ತಿರುವ ಬಂಡವಾಳಷಾಯಿಯನ್ನು ದುರ್ಬಲಗೊಳಿಸುವುದೇ ಮೂಲ ಉದ್ದೇಶವಾಗಿರುತ್ತೆ ಎಂಬುದನ್ನು ಸ್ಪಷ್ಟಪಡಿಸಿದರು. ನಂಜುಂಡಸ್ವಾಮಿಯವರು ಒಂದು ಹೆಜ್ಜೆ ಮುಂದೆ ಹೋಗಿ ಇದನ್ನು ಸರಿಪಡಿಸಲು ಕೊನೆಗೆ ಅಧಿಕಾರಿಷಾಹಿಯನ್ನು ನಮ್ಮ ಕೈಗೆ ತೆಗೆದುಕೊಳ್ಳಬೇಕಾಗಿದೆ ಎಂದರು. ಇಲ್ಲಿಯವರೆವಿಗೆ ರೈತರ ಮಕ್ಕಳು ಅಧಿಕಾರಕ್ಕೆ ಬಂದಿದ್ದರೂ ಅವರು ಪಡೆದ ಶಿಕ್ಷಣದ ಪ್ರಭಾವದಿಂದ ಬಂಡವಾಳಷಾಹಿಯನ್ನು ಮೆಚ್ಚಿಸುವುದೇ ಮುಖ್ಯ ಅಂಶವಾಗಿತ್ತು ಎಂಬುದು ಚರ್ಚೆಯ ತಿರುಳಾಗಿತ್ತು.

ನಾಡಕರ್ಣಿಯವರ ಅರ್ಥಪೂರ್ಣ ಪ್ರಬಂಧಕ್ಕೆ ಉತ್ತರಿಸುತ್ತ ನಂಜುಂಡಸ್ವಾಮಿಯವರು ನಾವು ಗಾಂಧೀಜಿಯವರ ಆರ್ಥಿಕ ಚಿಂತನೆಗೆ ಹೆಚ್ಚು ಪ್ರಾಧಾನ್ಯತೆಯನ್ನು ಕೊಡುವವರು ಎಂದರು. ಹಾಗೆಯೇ ಇಂಡಿಯಾದಂತಹ ಹಿಂದುಳಿದ ರಾಷ್ಟ್ರಕ್ಕೆ ಕೆಲವು ವರ್ಷಗಳಾದರೂ 'ವಿಶ್ವಮಾರುಕಟ್ಟೆ' ಯ ಬಗೆಗಿನ ಸಂಬಂಧವನ್ನು ಕಡಿದುಕೊಳ್ಳಬೇಕಾಗಿದೆ ಎಂದರು. ಚೀನ ದೇಶ ಈ ಕೆಲಸವನ್ನು ಮಾಡಿದ್ದರಿಂದ ಅವರು ತಮ್ಮ ನೆಲದಲ್ಲಿ ಸ್ವಾವಲಂಬನೆಯನ್ನು ಸಾಧಿಸಲು ಸಾಧ್ಯವಾಯಿತು ಎಂದು ಅಭಿಪ್ರಾಯಪಟ್ಟರು, ಹಾಗೆಯೇ ಸ್ವಾತಂತ್ರ್ಯ ಬಂದಾಗಿನಿಂದಲೂ ರೈತನ ಉತ್ಪಾದನೆಗೆ ಬೆಲೆ ನಿಯಂತ್ರಿಸಲು ಸಮಿತಿಗಳನ್ನು ಏರ್ಪಡಿಸಿದ್ದೇವೆ. ಆದರೆ ಕೈಗಾರಿಕ ಉತ್ಪಾದನೆಗೆ ಸಂಬಂಧಿಸಿದಂತೆ ಬೆಲೆ ನಿಯಂತ್ರಿಸಲು ಯಾಕೆ ಯಾವ ಸಮಿತಿಯನ್ನು ಏರ್ಪಡಿಸಲಿಲ್ಲ ಎಂದರು.

ಚರ್ಚೆಯಲ್ಲಿ ಮಾಜಿ ಸಂಸತ್ ಸದಸ್ಯ ಎಂ. ವಿ. ರಾಜಶೇಖರನ್‌ರವರೂ ಗಂಭೀರವಾಗಿ ಮಾತಾಡುತ್ತಾ ದಿನೇ ದಿನೇ ರೈತ ಹೇಗೆ ಕುಸಿಯುತ್ತಿದ್ದಾನೆ ಎಂಬುದನ್ನು ಸ್ಪಷ್ಟಪಡಿಸಿದರು. ಒಟ್ಟು ಚರ್ಚೆಯ ಕೊನೆಯವರೆವಿಗೂ ಮೂಕ ಪ್ರೇಕ್ಷಕರಾಗಿದ್ದವರೆಂದರೆ ಕೃಷಿ ಮಂತ್ರಿ ಬಿ. ಎಲ್. ಗೌಡ ಮತ್ತು ಕಾನೂನು ಮಂತ್ರಿ ಲಕ್ಷ್ಮೀಸಾಗರ್‌ರವರು.

"ಜಿಪುಣ ದೇಶದ ಒಡೆಯನಾಗಿರಬಾರದು ;
ಧಾರಾಳಿಯಾದವನಿಗೆ ಬಡತನ ಇರಬಾರದು"

—ಫಿರ್ದೂಸಿ

## ಎಲ್ಲ ಜ್ಞಾನಕ್ಕೂ ಮೂಲ ಅಕ್ಷರ ಜ್ಞಾನ ಕಡ್ಡಾಯವಾಗಿ ಅಕ್ಷರ ಕಲಿಯಿರಿ

ಅಭಿವೃದ್ಧಿಯ ಹಾದಿಯಲ್ಲಿ ಅನಕ್ಷರತೆ ಒಂದು ದೊಡ್ಡ ಆತಂಕ. ಇದನ್ನು ತೊಡೆದು ಹಾಕಲು ಸರ್ಕಾರ ಎರಡು ರೀತಿಯಲ್ಲಿ ಪ್ರಯತ್ನಿಸುತ್ತಿದೆ.

1) ಕಡ್ಡಾಯ ಪ್ರಾಥಮಿಕ ಶಿಕ್ಷಣ.
2) ವಯಸ್ಕರ ಶಿಕ್ಷಣ.

* ಈಗ ರಾಜ್ಯದ ಪ್ರತಿ ಹಳ್ಳಿಯಲ್ಲೂ ಪ್ರಾಥಮಿಕ ಶಾಲಾ ಸೌಲಭ್ಯವಿದೆ. ಐದು ವರ್ಷ ಹತ್ತು ತಿಂಗಳು ತುಂಬಿದ ಮಕ್ಕಳನ್ನು ತಪ್ಪದೆ ಶಾಲೆಗೆ ಕಳುಹಿಸುವುದು ಪೋಷಕರ ಪ್ರಥಮ ಕರ್ತವ್ಯ.

* ಪ್ರಾಥಮಿಕ ಶಿಕ್ಷಣದಿಂದ ವಂಚಿತರಾದ 15ವರ್ಷದಿಂದ 35ವರ್ಷದೊಳಗಿನ ವಯಸ್ಕರಿಗೆ ಅಕ್ಷರ ಮತ್ತು ವೃತ್ತಿಜ್ಞಾನ ನೀಡಲು ವಯಸ್ಕರ ಶಿಕ್ಷಣ ಸೌಲಭ್ಯವಿದೆ ಈ ಸೌಲಭ್ಯ ಪಡೆಯಲು ತಾಲ್ಲೂಕಿನ ವಯಸ್ಕರ ಶಿಕ್ಷಣ ಕಾರ್ಯಕರ್ತರು ಅಥವಾ ಸಹಾಯಕ ಶಿಕ್ಷಣಾಧಿಕಾರಿಗಳನ್ನು ಭೇಟಿ ಮಾಡಿ.

ಮಾನವ ಬದುಕಿಗೆ ಅಕ್ಷರಜ್ಞಾನ ಅತ್ಯಂತ ಅಗತ್ಯ ಅದನ್ನು ತಪ್ಪದೆ ಸಂಪಾದಿಸಿಕೊಳ್ಳಿ.

ಪ್ರಕಟಣೆ:

**ವಾರ್ತಾ ಮತ್ತು ಪ್ರಚಾರ ಇಲಾಖೆ**

**ಕರ್ನಾಟಕ ಸರ್ಕಾರ.**

## ಮಾಸ್ತಿ

ಒಬ್ಬ ಮನುಷ್ಯನ ಬದುಕಿನಲ್ಲಿ 94 ವರ್ಷ ಅಮೂಲ್ಯವಾದದ್ದು. ಅಷ್ಟೊಂದು ವರ್ಷ ನಗುನಗುತ್ತ ಬದುಕುವುದೇ ಒಂದು ಹೆಚ್ಚುಗಾರಿಕೆ. ಹಾಗೇ ಮಾಸ್ತಿ ನಗುತ್ತ ಬದುಕುವುದರ ಜೊತೆಗೆ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುತ್ತ ಬಂದವರು. ಈ ವಯಸ್ಸಿನಲ್ಲಿ ಅವರ ಲವಲವಿಕೆಯನ್ನು ಕಂಡು ನಾವು ನಾಚಿಕೆಪಟ್ಟುಕೊಳ್ಳಬೇಕು. ಎರಡು ವರ್ಷಗಳ ಹಿಂದೆ ಶೂದ್ರಕ್ಕಾಗಿ ವಿಶೇಷ ಸಂದರ್ಶನವನ್ನು ಎಚ್. ಎಸ್. ರಾಘವೇಂದ್ರರಾವ್ ಜೊತೆ ಕೂಡಿ ಪಡೆದಾಗ ಆದ ಅನುಭವವನ್ನು ಮರೆಯಲು ಸಾಧ್ಯವಿಲ್ಲ. ಅದೇ ಬೀದಿಯಲ್ಲಿ ಪುಟಾಣಿ ಮಕ್ಕಳಿಗೆ ಚಾಕಲೇಟ್‌ಹಂಚುವ, ಸಂಜೆಯಾದರೆ ಕಾರ್ಡ್ಸ್ ಆಡಬೇಕನ್ನುವ. ಊಟದ ಸಮಯದಲ್ಲಿ ಗೌಡರಂತೆ ಧಿಮಾಕಿನಿಂದ ಊಟಮಾಡುವ ಮತ್ತೆ ಊಟದ ನಂತರ ವಿಶ್ರಾಂತಿ ಬೇಕು ಎಂದು ಯೋಚಿಸದೆ ಅಧ್ಯಯನದಲ್ಲಿ ತೊಡಗುವ ಮಾಸ್ತಿ ನಮ್ಮ ಸಾಂಸ್ಕೃತಿಕ ವಲಯದ ಶ್ರೀಮಂತ ವ್ಯಕ್ತಿ. ಸುಮಾರು ನಲವತ್ತೈದು ವರ್ಷಗಳಿಂದ ಯಾರನ್ನು ಬೈದಿಲ್ಲ ಎಂಬುದು ನನ್ನಂಥವನಿಗೆ ಅಚ್ಚರಿಯ ಸಂಗತಿ. ಈ ಎಲ್ಲ ಗುಣಗಳ ಮೊತ್ತದಿಂದ ಅನೇಕ ಉತ್ತಮ ಕಥೆಗಳ ನಡುವೆ 'ಟಾಲ್‌ಸ್ಟಾಯ್ ಮಹರ್ಷಿಯ ಬೂರ್ಜ್ವಾವೃಕ್ಷ' ಎಂಬ ಅತ್ಯುತ್ತಮ ಕಥೆ ಬರೆದರು. ಇವರಿಗೆ ಬಂದ 'ಜ್ಞಾನಪೀಠಪ್ರಶಸ್ತಿ' ನಮ್ಮೆಲ್ಲರ ಪ್ರಶಸ್ತಿಯೂ ಆಗಿದೆ.

—ಶೂದ್ರ

L/NP/KRNU/72 No. M (2) PRB 211/73-74

ಮುಂದಿನ ಸಂಚಿಕೆಯಲ್ಲಿ:

ಗೌರೀಶಕಾಯ್ಕಿಣಿ — ರಮಜಾನ್‌ದರ್ಗಾ — ಜಯಂತಕಾಯ್ಕಿಣಿ — ನಿರ್ಮಲ ರೆಡ್ಡಿ
ವೇದವತಿ — ಎಸ್. ಮಾಲತಿ—ಶಶಿಕಲವಸ್ತ್ರದ—ಶಂಕರ್—ಕನಸಿಗೊಂದು ಕಣ್ಣು
ನಮ್ಮ ರಂಗಭೂಮಿಯ ರಾಜಕೀಯ ಚಟುವಟಿಕೆಗಳು, ಒಳನೋಟ ಇತ್ಯಾದಿ.



**Printed at: Shalivahan Printers, Bangalore-53. Editor & Publisher**
**M. SRINIVAS**